## ಕ್ಷೇತ್ರ ವಾರ್ತೆಗಳು



ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಮತ್ತು ರಮಣಶ್ರೀ ಪ್ರತಿಷ್ಠಾನ ಸಹಯೋಗದೊಂದಿಗೆ "ರಮಣಶ್ರೀ ಶರಣ ಪ್ರಶಸ್ತಿ" ಪ್ರದಾನ
ದಿನಾಂಕ:೧೭.೧೧.೨೦೨೧ ಪ್ರಶಸ್ತಿ ಪುರಸ್ಕೃತರು:ಡಾ. ಗುರುರಾಜ ಕರ್ಜಗಿ, ಡಾ. ಶಾಂತಾ ಇಮ್ರಾಪುರ, ಡಾ. ಪ್ರದೀಪ್‌ಕುಮಾರ್ ಹೆಬ್ರಿ, ಡಾ. ನಂದಾ ಪಾಟೀಲ, ಪೂಜ್ಯಶ್ರೀ ಜಪಾನಂದ ಸ್ವಾಮೀಜಿ, ಡಾ. ಜಿ. ಭಾಗ್ಯಮ್ಮ, ಸ್ಮಿತಾ ಬೆಳ್ಳೂರ್, ಎನ್.ಆರ್. ಗಣೇಶಮೂರ್ತಿ,
ಚಿತ್ರದಲ್ಲಿ: ಸನ್ಮಾನ್ಯ ಮುಖ್ಯಮಂತ್ರಿಗಳು ಶ್ರೀ ಬಸವರಾಜ ಬೊಮ್ಮಾಯಿ ಅವರು, ಡಾ. ಗೊ.ರು. ಚನ್ನಬಸಪ್ಪ,
ಶ್ರೀ ಎಸ್. ಷಡಕ್ಷರಿ, ಡಾ. ಮನುಬಳಿಗಾರ್ ಇತರರು




ಚಿಕ್ಕನಾಯಕನ ಹಳ್ಳಿ ತಾಲೂಕಿನ ನೂತನ ಅಧ್ಯಕ್ಷರ ಪದಸ್ವೀಕಾರ ಸಮಾರಂಭ
ದಿನಾಂಕ:೨೩.೧೧.೨೦೨೧ ಸಾನ್ನಿಧ್ಯ: ಪೂಜ್ಯ ಶ್ರೀ ಶ್ರೀ ಮೃತ್ಯುಂಜಯ ಸ್ವಾಮೀಜಿ, ಚಿತ್ರದಲ್ಲಿ: ಜೆ ಸಿ ಮಾಧುಸ್ವಾಮಿ ಪ್ರೊ. ಬಸವರಾಜು, ಎಂ.ವಿ. ನಾಗರಾಜ ರಾವ್, ಡಾ. ಗೊ.ರು. ಚೆನ್ನಬಸಪ್ಪ, ಡಾ.ಸಿಂ. ರಾ. ಹೊನ್ನಲಿಂಗಯ್ಯ, ಎಂ.ಜಿ. ಸಿದ್ದರಾಮಯ್ಯ, ಡಾ. ಪ್ರಶಾಂತ್ ಕುಮಾರ್ ಶೆಟ್ಟಿ, ಟಿ.ಸಿ. ಮಲ್ಲಿಕಾರ್ಜುನಯ್ಯ



ಬಸವನ ಬಾಗೇವಾಡಿ ತಾಲೂಕು ಶರಣ ಸಾಹಿತ್ಯ ಪರಿಷತ್ತು
ಲಿಂ. ಸೋಮೇಶ್ವರ ಚೌದ್ರಿ ಹಾಗೂ ಲಿಂ. ಮುಕಾಜಪ್ಪ ಕೂಡಗಿ ಬಿಸನಾಳ ದತ್ತಿ ಉಪನ್ಯಾಸ ದಿ:೧೦.೧೦.೨೦೨೧ ಸಾನ್ನಿಧ್ಯ: ಪೂಜ್ಯ ಸಿದ್ಧರಾಮ ಮಹಾಸ್ವಾಮಿಗಳು, ಚಿತ್ರದಲ್ಲಿ: ವೀರಣ್ಣ ಮರ್ತೂರ, ವೀರೇಶ ಕುಂಟೋಜಿ, ಹೆಚ್.ಎಸ್. ಬಿರಾದಾರ, ಶರಣು ಬಸ್ತಾಳ, ಬಸವರಾಜ ಹಡಪದ, ಎಂ.ಎಸ್. ಚೌದ್ರಿ, ಪಿ.ಎಲ್. ಹಿರೇಮಠ, ಜಿ. ಅಳ್ಳಗಿ, ಎಸ್.ಬಿ. ಬಸೆಟ್ಟಿ, ಎಸ್.ಐ. ಮನಗೂಳಿ, ಎಸ್.ಐ. ಮಿರಗಿ



# ಮಹಾಮನೆ

ಡಿಸೆಂಬರ್ – ೨೦೨೧ ಸಂಪುಟ : ೨೪ ಸಂಚಿಕೆ : ೦೫



ಪ್ರಕಾಶಕರು
ಗೊ.ರು. ಚನ್ನಬಸಪ್ಪ
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು
ಮೈಸೂರು

ಆಡಳಿತ ಕಾರ್ಯಾಲಯ
ಜಗದ್ಗುರು ಶ್ರೀ ಶಿವರಾತ್ರೀಶ್ವರ ವೃತ್ತ
೧ನೆಯ ಮುಖ್ಯರಸ್ತೆ
ಜಯನಗರ ೮ನೆಯ ವಿಭಾಗ
ಬೆಂಗಳೂರು – ೫೬೦ ೦೭೦
ದೂ: ೦೮೦ – ೨೯೬೭ ೦೧೨೫
E-mail:
mahamanemagazine@gmail.com

ಸಂಚಿಕೆಯ ಅಂತರಂಗ

ಬಿನ್ನಹ ೪
ಅಧ್ಯಕ್ಷರ ನುಡಿ ೫
ಅಲ್ಲಮಪ್ರಭು ಮತ್ತು ಮಾಯೆ ೧೦
– ಡಾ. ಎನ್.ಜಿ. ಮಹಾದೇವಪ್ಪ
ಅಕ್ಕನ ವಚನಗಳ ನಿರ್ವಚನ ೨೧
– ಡಾ. ಬಿದರಹಳ್ಳಿ ನರಸಿಂಹಮೂರ್ತಿ
ವಚನ ರಸಪ್ರಶ್ನೆ–೩೪ರ ಉತ್ತರ, ಪ್ರಶ್ನೆ ೩೫ ೨೫
ಅಗಣಿತ – ಪ್ರೊ. ಅಮರೇಶ ನುಗಡೋಣಿ ೨೭
ಕಲ್ಪಿತ, ಕಾಮಿತ ಮತ್ತು ಭಾವಿತವಲ್ಲದ ಸತ್ಯ ೨೮
– ಡಾ.ಓ.ಎಲ್. ನಾಗಭೂಷಣಸ್ವಾಮಿ
ಶರಣರು ಸಮಾಜಕ್ಕೆ ಕೊಟ್ಟ ಮಹತ್ವ ... ೩೧
– ಚಿಕ್ಕೋಳ್ ಈಶ್ವರಪ್ಪ
ಒಂದು ವಚನ – ಎರಡು ನೋಟ ೩೮
– ಡಾ. ಶೈಲಜ ಎಸ್.
– ಉದಯಕುಮಾರಿ ಎಂ.
ಇಷ್ಟಲಿಂಗ ಸಾಮಾಜಿಕ ಆಯಾಮ ೪೧
– ಪ್ರಕಾಶ ಗಿರಿಮಲ್ಲನವರ
ಶರಣ ಕ್ರಾಂತಿ – ನನ್ನ ಪ್ರತಿಕ್ರಿಯೆ ೫೪
– ಡಾ. ಲೋಕೇಶ ಅಗಸನಕಟ್ಟೆ
ವಚನ ವೈಚಾರಿಕತೆ–ವೈಜ್ಞಾನಿಕ ಮನೋಭಾವ ೫೯
– ಶ್ರೀಮತಿ ಸುಮಂಗಲಾ ಎಸ್. ಮುಮ್ಮಿಗಟ್ಟಿ
ಕ್ಷೇತ್ರವಾರ್ತೆಗಳು ೬೨
ಜಾಹಿರಾತುಗಳು ೬೫

ಬಿನ್ನಹ ......



# ಕಾಲಚಕ್ರದ ತಿರುಗಣಿಯಲ್ಲಿ . . .

ಮನುಷ್ಯರ ನಡೆಗೂ ಪ್ರಕೃತಿಯ ನಡೆಗೂ ಇಷ್ಟೊಂದು ಸಾಮ್ಯವಿರಬಹುದೇ? ಎನಿಸುತ್ತದೆ ಇತ್ತೀಚಿನ ವಿದ್ಯಮಾನಗಳನ್ನು ನೋಡಿದಾಗ. ಹಲವು ಬಗೆಯ ವಿಕಾರಗಳು ನಮ್ಮನ್ನು ಕಾಡುತ್ತಿವೆ. ಮನೋವಿಕಾರ, ಬುದ್ಧಿವಿಕಾರ ಮಾತ್ರವಲ್ಲ ತಾತ್ವಿಕ ವಿಕಾರಗಳೂ ನಮ್ಮನ್ನು ಕಾಡುತ್ತಿವೆ. ವಿ.ಎಸ್. ಖಂಡೇಕರರ ಬಹುಮುಖ್ಯ ಕಾದಂಬರಿ 'ಯಯಾತಿ'. ಆ ಕಾದಂಬರಿಯ ಪಾತ್ರವಾಗಿ ಕಚ ಒಮ್ಮೆ ಉದ್ಗರಿಸುತ್ತಾನೆ; 'ಈಶ್ವರ ಸೃಷ್ಟಿಸಿದ ಈ ಸುಂದರ ಜಗತ್ತಿನಲ್ಲಿ ಯಾಕೆ ಮನುಷ್ಯರೆಲ್ಲರೂ ನಿರುಮ್ಮಳವಾಗಿ ಬದುಕಲಾಗುವುದಿಲ್ಲ? ಈ ಪ್ರಶ್ನೆಗೆ ಉತ್ತರವಿಲ್ಲವೆಂದು ಗೊತ್ತಿದ್ದರೂ, ನನ್ನ ಮನಸ್ಸು ಮತ್ತು ಬುದ್ಧಿ ಸದಾ ಉತ್ತರವನ್ನು ಹುಡುಕುತ್ತಲೇ ಇವೆ. ಮನುಷ್ಯ ತಾನಾಗಿಯೇ ತಂದುಕೊಳ್ಳುವ ದುರಂತಗಳಿಗೆ ತುದಿಮೊದಲಿವೆಯೇ?' ಮಾನವ ಜಾತಿ ತಾನೊಂದೆ ವಲಂ ಎನ್ನುವ ಪಂಪನ ಉದ್ಗಾರ ಮತ್ತು ಕಚನ ಉದ್ಗಾರ ಎರಡೂ ಇಂದು ಅವಾಸ್ತವಿಕವಾಗಿ ಮಾತ್ರವಲ್ಲ, ಎಷ್ಟೋ ವೇಳೆ ಅಬದ್ಧ ಎನ್ನುವಂತೆಯೂ ಭಾಸವಾಗಿ ಬಿಡುವಷ್ಟು ನಮ್ಮ ಕಾಲ ಸಂದಿಗ್ಧತೆಯಲ್ಲಿವೆ.

ಮನುಷ್ಯ ತನ್ನೆಲ್ಲಾ ಶಕ್ತಿಯನ್ನು ಮಾನವ ಜಗತ್ತನ್ನು ಒಡೆಯುವುದಕ್ಕೇ ಬಳಸುತ್ತಿರುವುದೋ ಎನ್ನುವ ದಿಗ್ಭ್ರಮೆಯೂ ನಮ್ಮನ್ನು ಎದುರಾಗುತ್ತದೆ. ಭಾರತೀಯ ಸಂದರ್ಭದಲ್ಲಿ ಜಾತಿ ವ್ಯವಸ್ಥೆ ಇಂಥ ವಿಘಟನೆಗೆ ಮೂಲ ಎನಿಸುತ್ತದೆ. ಆದರೆ, ಜಾತಿ ವ್ಯವಸ್ಥೆಯ ರೋಗವಿಲ್ಲದ ಇತರ ಜಗತ್ತೂ ಇಷ್ಟೇ ಅಶಾಂತಿಯಿಂದ ಬಳಲುತ್ತಿದೆ ಎನ್ನುವುದು ಒಟ್ಟೂ ಮನುಷ್ಯನ ಧೋರಣೆಯನ್ನು ಧ್ವನಿಸುತ್ತದೆ. ಒಂದಿಲ್ಲೊಂದು ಬಗೆಯ ತರ-ತಮಗಳು ಮನುಷ್ಯರನ್ನು ಕೂಡಲಾಗದಂತೆ ಒಡೆಯುತ್ತಿವೆ. ಅವುಗಳಲ್ಲೆಲ್ಲ ಮುಖ್ಯವಾದುದು ಆರ್ಥಿಕ ತರ-ತಮ.

ಕೃತಕ ಸಂಪತ್ತಿನ ಉತ್ಪಾದನೆ ಮತ್ತು ಮಾರಾಟ ಹೆಚ್ಚಾದಷ್ಟೂ ಮನುಷ್ಯಕುಲ ಕವಲುಗಳಾಗಿ ಒಡೆಯುತ್ತಲೇ ಇವೆ. ಶ್ರೀಮಂತ, ಮಧ್ಯಮ, ಕೆಳ-ಮಧ್ಯಮ, ಮತ್ತು ಬಡ ಎನ್ನುವ ವರ್ಗೀಕರಣಗಳ ವ್ಯಾಖ್ಯಾನ ಇಂದು ಹಿಂದೆ ಇದ್ದಂತೆ ಇಲ್ಲ. ಒಂದು ಇನ್ನೊಂದರ ಕಡೆಗೆ ಚಲಿಸಬಹುದಾದ ಅವಕಾಶಗಳೇ ಇಂದು ಕಾಣೆಯಾಗುತ್ತಿವೆ. ಶ್ರೀಮಂತರು ಕೊನೆಯಿಲ್ಲದ ಎತ್ತರದ ಆಕಾಶದ ಕಡೆಗೆ ವೇಗವಾಗಿ ಚಲಿಸುತ್ತಿದ್ದರೆ, ಬಡವರು ಅಷ್ಟೇ ವೇಗವಾಗಿ ಮೇಲೇಳಲಾಗದ ಪ್ರಪಾತದ ಕಡೆಗೆ ಚಲಿಸುತ್ತಿದ್ದಾರೆ. ಸರಳ ಜೀವನ ಎನ್ನುವುದು ಇಂದು ಆಯ್ಕೆಯಾಗಿ, ಆದ್ಯತೆಯಾಗಿ ಉಳಿಯುವ ಸಾಧ್ಯತೆಗಳು ದಿನೇ ದಿನೇ ಕ್ಷೀಣಿಸುತ್ತಿದೆ. ಅಥವಾ ಇದನ್ನು ಇತ್ಯಾತ್ಮಕವಾಗಿ ಹೀಗೆ ಹೇಳೋಣವೇ? ಶ್ರೀಮಂತರು ಮತ್ತು ಬಡವರ ನಡುವಿನ ಅಂತರ ಹೆಚ್ಚುತ್ತಾ ಹೆಚ್ಚುತ್ತಾ ಹೋಗಿ ಕೊನೆಗೊಮ್ಮೆ ಎರಡೂ ಕುಸಿದು ಜಗತ್ತು ಮೊದಲಿನಿಂದ ಪ್ರಯಾಣವನ್ನು ಆರಂಭಿಸುವ ದಿನಗಳು ಸನಿಹವಾಗುತ್ತಿವೆ. ಜೆ.ಸಿ. ಕುಮಾರಪ್ಪನವರಂತಹ ದಾರ್ಶನಿಕ ಅರ್ಥಶಾಸ್ತ್ರಜ್ಞರು ಮುಂದೊಂದು ದಿನ ನಮ್ಮ ಮೊದಲ ಗುರುಗಳಾದಾರು.

ಈ ಸಂಚಿಕೆಯಲ್ಲಿ ಕನ್ನಡದ ಹಲವು ಲೇಖಕರು ಶರಣ ಚಳವಳಿ ಮತ್ತು ಪರಂಪರೆಯ ಬಗ್ಗೆ ಲೇಖನಗಳನ್ನು ನೀಡಿ ತಮ್ಮ ವಿಚಾರಗಳನ್ನು ಓದುಗರೊಂದಿಗೆ ಹಂಚಿಕೊಂಡಿದ್ದಾರೆ. ಇವರೆಲ್ಲರಿಗೆ ಹಾಗೂ ಎಂದಿನಂತೆ ಪೂರ್ಣ ಸಹಕಾರವನ್ನು ನೀಡಿರುವ ಕಾರ್ಯಾಲಯದ ಸಿಬ್ಬಂದಿಯವರಿಗೆ ಮತ್ತು ಮುಖಪುಟದ ಕಲಾವಿದ ಶ್ರೀ ಮುರಳೀಧರ ವಿ. ರಾಠೋಡ ಅವರಿಗೆ ಸಂಪಾದಕ ಮಂಡಳಿಯ ಪರವಾಗಿ ಹೃತ್ಪೂರ್ವಕ ಕೃತಜ್ಞತೆಗಳು.

**ಡಾ.ಎಂ.ಎಸ್. ಆಶಾದೇವಿ**



# ಅಧ್ಯಕ್ಷರ ನುಡಿ

'ಮಹಾಮನೆ'ಯ ಮೊದಲ ಪ್ರಾಯೋಗಿಕ ಸಂಚಿಕೆ ಪ್ರಕಟವಾಗಿದ್ದು ದಿನಾಂಕ: ೧.೧೧.೧೯೯೭ರಂದು. ಆ ಸಂಚಿಕೆಯ 'ಅಧ್ಯಕ್ಷರ ನುಡಿ' ಅಂಕಣದಲ್ಲಿ "ಮಹಾಮನೆ" ಸಾತ್ವಿಕ ಚಿಂತನೆಯ ಒಂದು ಮುಕ್ತವೇದಿಕೆ. ಸಲ್ಲದ ಗೊಂದಲಗಳಿಗಿಂತ ಸಲ್ಲುವ ಗುರಿಯತ್ತ ಅದರ ಗಮನ. ಶರಣರ ನಡೆ-ನುಡಿಗಳ ಹಣತೆಯಾಗಿ ವಿನೀತ ಸೇವೆ ಸಲ್ಲಿಸಬೇಕೆಂಬುದು ಅದರ ಹಂಬಲ. ಅದು ನಂದದಂತೆ ನೋಡಿಕೊಳ್ಳಲು ಸಮಸ್ತ ಬಂಧುಗಳಲ್ಲಿ ಬಿನ್ನಹ' ಎಂದು ನಾನು ಬರೆದಿದ್ದೆ.

ಅಂತೆಯೇ, ನನ್ನ ಬಿನ್ನಹವನ್ನು ಮನ್ನಿಸಿ, ನಾಡಿನ ಶರಣ ಸಾಹಿತ್ಯ-ಸಂಸ್ಕೃತಿ ಅಭಿಮಾನಿಗಳು ಮತ್ತು ಲೇಖಕರು ನೋಡಿಕೊಂಡು ಬರುತ್ತಿರುವ ಕಾರಣದಿಂದಾಗಿ 'ಮಹಾಮನೆ' ಕಳೆದ ೨೪ ವರ್ಷಗಳ ಕಾಲ ನಿರಂತರವಾಗಿ ನಡೆದುಕೊಂಡು ಬಂದು, ಈಗ ೨೫ನೆಯ ವರ್ಷಕ್ಕೆ ಕಾಲಿಟ್ಟಿದೆ ಎನ್ನುವುದೇ ಒಂದು ಅಭಿಮಾನದ ಸಂಗತಿ.

ಆರಂಭದಿಂದ, ಸಾಂದರ್ಭಿಕ ಸಂಯುಕ್ತ ಸಂಚಿಕೆಗಳೂ ಸೇರಿದಂತೆ, ಒಟ್ಟು ೨೫೨ ಸಂಚಿಕೆಗಳಲ್ಲಿ ನಾನು ಈ 'ಅಧ್ಯಕ್ಷರ ನುಡಿ' ಅಂಕಣದಲ್ಲಿ ಬರೆದಿದ್ದೇನೆ. ಆ ಬರಹಗಳನ್ನು ಕೆಲವರು ಮೆಚ್ಚಿರಬಹುದು; ಮತ್ತೆ ಕೆಲವರು ಚುಚ್ಚಿರಬಹುದು. ಆದರೆ, ಇಷ್ಟಂತೂ ನಿಜ. ಮೆಚ್ಚಿದವರ ಸಂಖ್ಯೆ ಹೆಚ್ಚಾಗಿದ್ದ ಕಾರಣ ಚುಚ್ಚಿದವರು ಮುಚ್ಚಿಹೋಗಿದ್ದಾರೆ. ಏನಿದ್ದರೂ, ನಾನು ಆ ಮೆಚ್ಚು-ಚುಚ್ಚುಗಳೆರಡನ್ನೂ ಸಮದೃಷ್ಟಿಯಿಂದಲೇ ಕಾಣುತ್ತ ಬಂದಿದ್ದೇನೆ. ಮೆಚ್ಚಿದವರಿಗೆ 'ನಿಮ್ಮ ಅಭಿಮಾನ' ಎಂದಿದ್ದೇನೆ. ಚುಚ್ಚಿದವರಿಗೆ 'ನಿಮ್ಮ ಆಸಕ್ತಿ' ಎಂದಿದ್ದೇನೆ. ಹಾಗಾಗಿ ನನಗೆ ಯಾರ ಸಂಬಂಧವೂ ದೂರವಾಗಿಲ್ಲ.

ಈ ಸಲದ 'ಅಧ್ಯಕ್ಷರ ನುಡಿ' ಅಂಕಣಕ್ಕೆ ೨೫೭ನೆಯ ಬಾರಿಗೆ ಬರೆದಿದ್ದೇನೆ. ಇದು ಈ ಅಂಕಣಕ್ಕೆ ನನ್ನ ಅಂತಿಮ ವಿದಾಯದ ವೀಳೆಯ! ಸ್ವಸಂತೋಷದಿಂದ ಸ್ವಯಂ ನಿವೃತ್ತಿ ಹೊಂದಿರುವ ಸಾಂಪ್ರತ! ನಾಲ್ಕು ಮಾತು ಹೆಚ್ಚಾಗಿದ್ದರೆ, ಅಭಿಮಾನದ ಓದುಗರ ಕ್ಷಮೆಯಿರಲಿ.

'ಮಹಾಮನೆ'ಯ ಘನತೆ-ಗಾಂಭೀರ್ಯಕ್ಕೆ ಅನುಗುಣವಾಗಿ ಅದನ್ನು ನಡೆಸಿಕೊಂಡು ಬರಲು ಈ ಹಿಂದೆ ಸಂಪಾದಕರಾಗಿ ಸೇವೆ ಸಲ್ಲಿಸಿದ ಆತ್ಮೀಯರಾದ ಎಸ್. ಚಂದ್ರಶೇಖರ್, ಡಾ. ಎಂ.ಜಿ. ನಾಗರಾಜ್, ಎಚ್.ಎಸ್. ಸಿದ್ಧಗಂಗಪ್ಪ, ಡಾ. ರುದ್ರೇಶ್ ಅದರಂಗಿ, ಡಾ. ಸಿ.ಯು. ಮಂಜುನಾಥ, ಡಾ. ಉಷಾಕಿರಣ್, ಮುಕ್ತಾ ಕಾಗಲಿ, ಮಾಣಿಕರಾವ್ ಪಸಾರ, ಡಾ.ಹೆಚ್.ಎಸ್.ಎಂ. ಪ್ರಕಾಶ್ ಅವರನ್ನು ಕೃತಜ್ಞತೆಯಿಂದ ಸ್ಮರಿಸುತ್ತೇನೆ. 'ಮಹಾಮನೆ' ಪತ್ರಿಕೆಗೆ ಒಂದು ಮಹತ್ವದ ತಿರುವು ಕೊಟ್ಟ, ಕೆಲ ಕಾಲ ಪರಿಷತ್ತಿನ ಅಧ್ಯಕ್ಷರಾಗಿದ್ದ ಹಿರಿಯ ವಿದ್ವಾಂಸರಾದ ಡಾ. ಬಸವರಾಜ ಸಾದರ ಅವರ ಸೇವೆ ನಿಜಕ್ಕೂ ಸ್ಮರಣೀಯ. ಪ್ರಸ್ತುತ ಸಂಪಾದಕರಾಗಿರುವ ನಮ್ಮ ನಾಡಿನ ಹಿರಿಯ ವಿಮರ್ಶಕರೂ, ಗಂಭೀರ ಚಿಂತಕರೂ

ಆದ ಡಾ. ಆಶಾದೇವಿ ಅವರಂತೂ 'ಮಹಾಮನೆ'ಯನ್ನು ಅತ್ಯಂತ ಶ್ರದ್ಧಾಸಕ್ತಿಗಳಿಂದ ಮುನ್ನಡೆಸಿಕೊಂಡು ಬರುತ್ತಿದ್ದಾರೆ. ಹಾಗೆಯೇ ನಾಡಿನ ಅನೇಕ ಹಿರಿಯ ಲೇಖಕರು ಮತ್ತು ಆಸಕ್ತ ಬರಹಗಾರರು 'ಮಹಾಮನೆ' ಹಣತೆಗೆ ತೈಲ ಒದಗಿಸುತ್ತ ಬಂದಿದ್ದಾರೆ. ಇವರೆಲ್ಲರ ಸಹಕಾರವನ್ನು ನಾನೆಂದಿಗೂ ಮರೆಯಲಾರೆ.

'ಮಹಾಮನೆ'ಯ ಓದುಗರ ಅಭಿಮಾನ-ಆಸಕ್ತಿಗಳಂತೂ ಹೃದಯ ತುಂಬಿ ಬರುವಂತಹವು. ಅನೇಕ ಓದುಗರು ಆಯಾ ತಿಂಗಳ ಸಂಚಿಕೆ ಕುರಿತು ಮೆಚ್ಚುಗೆ ಸೂಚಿಸಿದಂತೆ, ಲೋಪದೋಷಗಳ ಬಗೆಗೂ ತಿಳಿಸುತ್ತ ಬಂದಿದ್ದಾರೆ. 'ಮಹಾಮನೆ'ಯ ಪ್ರಸಾರಸಂಖ್ಯೆ ನಿರೀಕ್ಷಿತ ಪ್ರಮಾಣದಲ್ಲಿ ಬೆಳೆಯದಿದ್ದರೂ, ಸದಭಿರುಚಿಯ, ವೈಚಾರಿಕ ಪ್ರಜ್ಞೆಯ ಓದುಗರಂತೂ ಇದ್ದಾರೆ. 'ಮಹಾಮನೆ' ಯಾವುದೇ ವಾಣಿಜ್ಯೋದ್ದೇಶದ ಅಥವಾ ಮನರಂಜನೆಯ ಪತ್ರಿಕೆಯಲ್ಲ. ಅದು ಒತ್ತು ಕೊಟ್ಟಿರುವುದು ಪ್ರಸ್ತಾರವ್ಯಾಪ್ತಿಗಿಂತ ಪರಿಣಾಮಪ್ರಾಪ್ತಿಗೆ. ಈ ದೃಷ್ಟಿಯಿಂದ ನಾಡಿನ ಸಾಹಿತ್ಯ ಸಂಚಿಕೆಗಳ ಸಾಲಿನಲ್ಲಿ ನಮ್ಮ 'ಮಹಾಮನೆ' ತನ್ನದೇ ವೈಶಿಷ್ಟ್ಯದಿಂದ ಗುರುತಿಸಿಕೊಂಡಿದೆ ಎಂದು ಹೇಳಲು ನಾನು ಹರ್ಷಿಸುತ್ತೇನೆ.

'ಮಹಾಮನೆ'ಯಲ್ಲಿ ಪ್ರಕಟವಾಗುವ ಎಲ್ಲ ಲೇಖನಗಳೂ ವಿದ್ವತ್‌ಪೂರ್ಣವಾಗಿರುತ್ತವೆ ಎಂದೇನಿಲ್ಲ. ಅದು ಸಾಮಾನ್ಯ ಓದುಗರನ್ನು ಗಮನದಲ್ಲಿಟ್ಟುಕೊಂಡು, ಗಹನ ಚಿಂತನೆಯ ಗಂಭೀರ ಲೇಖನಗಳ ಜೊತೆಗೆ, ಸುಲಭಗ್ರಾಹ್ಯದ ಸರಳ ಲೇಖನಗಳನ್ನೂ ಒಳಗೊಂಡಿರುತ್ತದೆ. ನಾಡಿನ ಪ್ರತಿಷ್ಠಿತ ವಿದ್ವಾಂಸರು ಮತ್ತು ವಿಮರ್ಶಕರ ಲೇಖನಗಳಿದ್ದಂತೆ, ಆಸಕ್ತ ಮತ್ತು ಉದಯೋನ್ಮುಖರ ಬರಹಗಳೂ ಇರುತ್ತವೆ. ಹಾಗಾಗಿ, 'ಮಹಾಮನೆ' ಅರಿತವರು ಮತ್ತು ಅರಿವಿನ ಆಸಕ್ತರಿಬ್ಬರಿಗೂ ಬೇಕಾದ ನಿಯತಕಾಲಿಕೆಯಾಗಿದೆ ಎಂದು ಹೇಳಬಹುದು.

ಈ 'ಮಹಾಮನೆ'ಯ ಮಾತೃಸಂಸ್ಥೆ – ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು. ಈ ರಾಷ್ಟ್ರೀಯ ಸಂಸ್ಥೆಯ ಸಂಸ್ಥಾಪಕರಾದ ಸುತ್ತೂರು ಧರ್ಮಪೀಠದ ಪೂಜ್ಯ ಶ್ರೀ ಡಾ. ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳ ಮುಖ್ಯ ಆಶಯವೇ, ಶರಣರ ವಿಚಾರಧಾರೆಯನ್ನು ಇಂದಿನ ತಲೆಮಾರಿಗೆ ಮುಟ್ಟಿಸಬೇಕೆಂಬುದಾಗಿತ್ತು. ಲಿಂ. ಪೂಜ್ಯರ ಆ ಆಶಯವನ್ನು ಹೊತ್ತು ನಿತ್ತರಿಸುವಲ್ಲಿ 'ಮಹಾಮನೆ' ನಿಷ್ಠೆಯ ಸೇವೆ ಸಲ್ಲಿಸುತ್ತಿದೆ ಎಂದು ಹೇಳಿದರೆ, ಹೆಚ್ಚು ಹೇಳಿದಂತೇನಲ್ಲ. ವಾಸ್ತವವಾಗಿ, ಪರಿಷತ್ತು ಮತ್ತು ಪರಿಷತ್ತಿನ ಅಭಿಮಾನಿಗಳ ನಡುವೆ ಒಂದು ಸಂಬಂಧ ಸೇತುವಾಗಿರುವುದೇ 'ಮಹಾಮನೆ'!

ಪರಿಷತ್ತು ಆರಂಭವಾಗಿ ಇಲ್ಲಿಗೆ ೩೫ ವರ್ಷಗಳೇ ಆಗಿವೆ. ಈ ಅವಧಿಯಲ್ಲಿ ಪರಿಷತ್ತು ಕರ್ನಾಟಕ ರಾಜ್ಯದ ಎಲ್ಲ ಜಿಲ್ಲೆ ಹಾಗೂ ತಾಲೂಕುಗಳೇ ಅಲ್ಲದೆ ಹೊರರಾಜ್ಯಗಳಲ್ಲೂ ತನ್ನ ಕ್ಷೇತ್ರ ಘಟಕಗಳನ್ನು ಸ್ಥಾಪಿಸಲು ಸಾಧ್ಯವಾಗುವಲ್ಲಿ 'ಮಹಾಮನೆ'ಯ ಪಾತ್ರವೂ ಇದೆ ಎಂದು ತಿಳಿಸಲು ನಾನು ಅಭಿಮಾನಪಡುತ್ತೇನೆ.

ನಾನು ೧೯೮೬ರಿಂದ ಇದುವರೆಗೆ (ಮಧ್ಯದ ೩-೪ ವರ್ಷಗಳ ಅನಿವಾರ್ಯದ ಹೊರತಾಗಿ) ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷನಾಗಿ ಸೇವೆ ಸಲ್ಲಿಸಲು ಅವಕಾಶವಾಗಿದೆ. ಆದರೆ, ಕಳೆದ ಹತ್ತಾರು ವರ್ಷಗಳಿಂದ ನನ್ನ ವೃದ್ಧಾಪ್ಯದಿಂದಾಗಿ ಆ ಸ್ಥಾನದಿಂದ ಬಿಡುಗಡೆಗಾಗಿ ಪರಿಷತ್ತಿನ ಗೌರವಾಧ್ಯಕ್ಷರು ಮತ್ತು ಸರ್ವಸದಸ್ಯರ ವಾರ್ಷಿಕ



ಸಭೆಗಳಲ್ಲಿ ಬೇಡಿಕೊಳ್ಳುತ್ತಲೇ ಬಂದಿದ್ದೆ. ಆ ಬಿಡುಗಡೆಯ ಸಂದರ್ಭ ಬರುವ ಸೂಚನೆಯೇ ಕಾಣದಿದ್ದಾಗ, ನಾನು ಸ್ವಯಂನಿವೃತ್ತಿಯ ನಿರ್ಧಾರಕ್ಕೆ ಬರಲೇಬೇಕಾಯಿತು.

ನಾನು, ಪರಿಷತ್ತಿನ ಅಧ್ಯಕ್ಷ ಸ್ಥಾನ ಒಂದು ಅಧಿಕಾರವೆಂದು ಭಾವಿಸದೆ, ಸಾರ್ವಕಾಲಿಕ ಪ್ರಸ್ತುತತೆಯ ಶರಣ ಸಾಹಿತ್ಯ ಮತ್ತು ಸಂಸ್ಕೃತಿಗಳಿಗೆ ಸಲ್ಲಿಸುವ ಒಂದು ಸೇವಾವಕಾಶವೆಂದೇ ತಿಳಿದು ನನ್ನ ಮಿತಿಗೆ ಸಾಧ್ಯವಿದ್ದಷ್ಟು ಸೇವೆಯನ್ನು ಸಲ್ಲಿಸಿದ್ದೇನೆಂದು ವಿನಮ್ರನಾಗಿ ಅರಿಕೆ ಮಾಡಿಕೊಳ್ಳುತ್ತೇನೆ. ಪರಿಷತ್ತಿನಂತಹ ಸೇವಾ ಸಂಸ್ಥೆಗಳಲ್ಲಿ ಅಧ್ಯಕ್ಷರು ಅಥವಾ ಪದಾಧಿಕಾರಿಗಳ ಬದಲಾವಣೆ ಸರ್ವ ಸಾಮಾನ್ಯ. ಮುಖ್ಯವಾಗುವುದು ಆ ಸಂಸ್ಥೆಯು ತನ್ನ ಧ್ಯೇಯೋದ್ದೇಶದಂತೆ ಮುನ್ನಡೆಯುವುದು.

ಪರಿಷತ್ತನ್ನು ಸ್ಥಾಪಿಸಿದ ಲಿಂ. ಪೂಜ್ಯ ಶ್ರೀ ಡಾ. ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳ ಸಂಕಲ್ಪ, ಪರಿಷತ್ತಿನ ಸ್ಥಾಪಕ ಅಧ್ಯಕ್ಷರಾಗಿದ್ದ ಲಿಂ. ಡಾ. ಎಚ್. ತಿಪ್ಪೇರುದ್ರಸ್ವಾಮಿ ಅವರು ಒದಗಿಸಿದ ಆಧಾರ ಮತ್ತು ಪರಿಷತ್ತಿನ ಗೌರವಾಧ್ಯಕ್ಷರಾಗಿರುವ ಪೂಜ್ಯ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು ಹಾಗೂ ಪೂಜ್ಯ ಶ್ರೀ ಡಾ. ತೋಂಟದ ಸಿದ್ಧರಾಮ ಮಹಾಸ್ವಾಮಿಗಳ ಮಾರ್ಗದರ್ಶನ ಇವುಗಳಿಂದಾಗಿ ಪರಿಷತ್ತು ಮುಂಬರುವ ದಿನಗಳಲ್ಲಿ ಇನ್ನೂ ಹೆಚ್ಚು ವಿಸ್ತೃತವಾಗಿ ಮುನ್ನಡೆಯುವುದೆಂಬ ವಿಶ್ವಾಸ ನನಗಿದೆ.

ನಾಲ್ಕು ವರ್ಷಗಳ ಹಿಂದೆ ನನ್ನ ದೈಹಿಕ ಅಸ್ವಸ್ಥತೆಯ ಕಾರಣದಿಂದಾಗಿ ನಮ್ಮ ಕೋರಿಕೆಯನ್ನು ಮನ್ನಿಸಿ, ಪರಿಷತ್ತಿನ ಅಧ್ಯಕ್ಷ ಸ್ಥಾನ ವಹಿಸಿಕೊಂಡು, ಅತ್ಯಂತ ನಿಷ್ಠೆಯಿಂದ ಕಾರ್ಯನಿರ್ವಹಿಸಿದ ನಾಡಿನ ಪ್ರಸಿದ್ಧ ವಿದ್ವಾಂಸರೂ, ವಿಮರ್ಶಕರೂ, ವಚನ ಸಾಹಿತ್ಯದ ಉಸಿರಿನಂತಿರುವವರೂ ಆದ ಡಾ. ಬಸವರಾಜ ಸಾದರ ಮತ್ತು ನಿವೃತ್ತ ವಾರ್ತಾಧಿಕಾರಿಗಳೂ, ಕಲ್ಯಾಣ ಕರ್ನಾಟಕ ಭಾಗದ ಪ್ರಮುಖರೂ ಆದ ಶ್ರೀ ಅಪ್ಪಾರಾವ ಅಕ್ಕೋಣೆ ಅವರೂ ಸ್ಮರಣೀಯ ಸೇವೆ ಸಲ್ಲಿಸಿದ್ದಾರೆ. ನನ್ನ ಆತ್ಮೀಯರೇ ಆಗಿದ್ದ ಅವರಿಬ್ಬರೂ ಸಹೃದಯರನ್ನು ಮತ್ತು ಆರಂಭದಿಂದ ಇದುವರೆಗೆ ಪರಿಷತ್ತಿನ ಕಾರ್ಯಸಮಿತಿಯಲ್ಲಿದ್ದು ನನಗೆ ಬೆಂಬಲ ನೀಡಿದ ಪದಾಧಿಕಾರಿಗಳು ಮತ್ತು ಸದಸ್ಯರಿಗೆ ನನ್ನ ಕೃತಜ್ಞತೆ ಸಲ್ಲಿಸುತ್ತೇನೆ. ಹಾಗೆಯೇ ಪರಿಷತ್ತಿನ ಸರ್ವಸದಸ್ಯರು ನನ್ನ ಬಗೆಗೆ ತೋರಿದ ವಿಶ್ವಾಸಾದರಗಳಂತೂ ನನ್ನನ್ನು ಭಾವಪರವಶವಾಗಿಸಿವೆ.

ನನ್ನ ದೈಹಿಕ ಸ್ಥಿತಿಯಿಂದಾಗಿ, ನಾಲ್ಕು ವರ್ಷಗಳ ಹಿಂದೆಯೇ ನಿವೃತ್ತನಾಗಿದ್ದರೂ, ಆ ಮಧ್ಯೆ ಅಧ್ಯಕ್ಷರಾದ ಇಬ್ಬರೂ ಆ ಸ್ಥಾನದಲ್ಲಿ ತಮ್ಮ ವೈಯಕ್ತಿಕ ಕಾರಣಗಳಿಂದ ಮುಂದುವರೆಯಲು ಇಚ್ಛಿಸದ ಕಾರಣ, ಇದ್ದಕ್ಕಿದ್ದಂತೆ ತೆರವಾದ ಅಧ್ಯಕ್ಷ ಸ್ಥಾನಕ್ಕೆ ಪರ್ಯಾಯ ವ್ಯವಸ್ಥೆ ಮಾಡಬೇಕಾಗಿದ್ದ ಕಳೆದ ಸಲದ ಸರ್ವಸದಸ್ಯರ ಸಭೆಯಲ್ಲಿ ಮತ್ತೆ ನಾನೇ ಅಧ್ಯಕ್ಷನಾಗಿ ಮುಂದುವರೆಯಬೇಕೆಂದು ಕೈಗೊಂಡ ಸರ್ವಾನುಮತದ ನಿರ್ಧಾರದ ದಾಕ್ಷಿಣ್ಯಕ್ಕೆ ಒಳಗಾಗಿ, ನಾನು ಇದೇ ೨೦೨೧ರ ಏಪ್ರಿಲ್ ೧ರಿಂದ ಮತ್ತೆ ಆ ಸ್ಥಾನ ವಹಿಸಿಕೊಳ್ಳಬೇಕಾಯಿತು. ಅಲ್ಲಿಂದೀಚೆಗೆ ಪರಿಷತ್ತಿನ ಪದಾಧಿಕಾರಿಗಳಾಗಿ ನನಗೆ ನೆರವಾಗಿರುವ, ಹಿರಿಯ ಉಪಾಧ್ಯಕ್ಷರಾದ ಶ್ರೀ ಅಪ್ಪಾರಾವ ಅಕ್ಕೋಣೆ, ಉಪಾಧ್ಯಕ್ಷರಾದ ಡಾ.ಸಿಂ.ರಾ. ಹೊನ್ನಲಿಂಗಯ್ಯ, ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಪ್ರಧಾನ ಕಾರ್ಯದರ್ಶಿಗಳಾದ ಶ್ರೀ ಎಸ್.ಬಿ. ಅಂಗಡಿ, ಕೋಶಾಧ್ಯಕ್ಷರಾದ

ಶ್ರೀ ಎಸ್.ಎಂ. ಹಂಪಯ್ಯ, ಕಾರ್ಯದರ್ಶಿಗಳಾದ ಶ್ರೀ ಶ್ರೀಶೈಲ ಪಟ್ಟಣಶೆಟ್ಟಿ, ಶ್ರೀ ದಯಾನಂದ ಪಾಟೀಲ, ಸಮನ್ವಯಾಧಿಕಾರಿಗಳಾದ ಡಾ. ಕುರುವ ಬಸವರಾಜ ಈ ಎಲ್ಲ ಬಂಧುಗಳು ಹಾಗೆಯೇ ಕಾರ್ಯಾಲಯ ಸಿಬ್ಬಂದಿ ಶ್ರೀ ಪುಟ್ಟರಾಜು ವಿ., ಶ್ರೀಮತಿ ಯಶೋದಾ ಭಾಸ್ಕರ್, ಶ್ರೀ ಗಿರೀಶ ಎನ್., ಶ್ರೀ ರಾಕೇಶ ಎಸ್. ಮತ್ತು ಶ್ರೀ ಎಸ್. ವಿದ್ಯಾರಣ್ಯ ಅವರ ಸೇವೆಯನ್ನೂ ನೆನೆಯುತ್ತೇನೆ.

ನಾನು ವಿಶೇಷವಾಗಿ ಸ್ಮರಿಸಬೇಕಾದವರೆಂದರೆ, ಸುದೀರ್ಘ ಕಾಲ ಪರಿಷತ್ತಿನ ಹಿರಿಯ ಉಪಾಧ್ಯಕ್ಷರಾಗಿದ್ದ ಶ್ರೀ ಚಂದ್ರಕಾಂತ ಬೆಲ್ಲದ ಮತ್ತು ಪ್ರಧಾನ ಕಾರ್ಯದರ್ಶಿಗಳಾಗಿ ಅತ್ಯಂತ ನಿಷ್ಠೆಯ ಸೇವೆ ಸಲ್ಲಿಸಿದ ಶ್ರೀ ಜಿ.ಪಿ. ಚಿಕ್ಕರಿಯಪ್ಪ ಆರಂಭದಲ್ಲಿ ಪ್ರಧಾನ ಕಾರ್ಯದರ್ಶಿಗಳಾಗಿದ್ದ ಶ್ರೀ ಟಿ.ಆರ್. ಮಹಾದೇವಯ್ಯ ಮತ್ತು ಶ್ರೀ ಶಿವಸ್ವಾಮಿ ಅವರು.

ನಾನು ಹೀಗೆ ಪರಿಷತ್ತಿನ ಕಾರ್ಯದಲ್ಲಿ ಸಂಪೂರ್ಣವಾಗಿ ಸಹಕರಿಸಿದ ಬಂಧುಗಳನ್ನು ವಂದಿಸುವುದು ಮತ್ತು ಕೃತಜ್ಞತೆ ಸಲ್ಲಿಸುವುದು ಕೇವಲ ಶಿಷ್ಟಾಚಾರದ ಉಪಚಾರವಲ್ಲ; ಅವರೆಲ್ಲ ಪರಿಷತ್ತನ್ನು ಕಟ್ಟಿ ಬೆಳೆಸಿದವರೆನ್ನುವ ಕಾರಣದ ಉಪಕಾರ ಸ್ಮರಣೆ. ಎಂದಿನಂತೆ ಮುಂದಿನ ದಿನಗಳಲ್ಲೂ ಪರಿಷತ್ತಿನ ಸಹಭಾಗಿಗಳಾಗಿಯೇ ಇರಬೇಕೆಂದು ನಾನು ಈ ಸಂದರ್ಭದಲ್ಲಿ ಅವರೆಲ್ಲರಲ್ಲೂ ಮನವಿ ಮಾಡಿಕೊಳ್ಳುತ್ತೇನೆ.

ಬಂಧುಗಳೇ, ಪರಿಷತ್ತನ್ನು ಇನ್ನೂ ಎತ್ತರಕ್ಕೆ ಬೆಳೆಸಲು ಸಾಧ್ಯವಿತ್ತೇನೋ? ಆದರೆ, ವಯೋಸಹಜ ದೈಹಿಕ ಅಸಹಾಯಕತೆಯಿಂದಾಗಿ ನಾನು ನಿರೀಕ್ಷಿಸಿದಂತೆ ಸಾಧ್ಯವಾಗಲಿಲ್ಲವೆಂಬ ಕೊರಗಿನ ಮಧ್ಯೆಯೂ, ಯಾವುದೇ ನಿರ್ದಿಷ್ಟ ಸಂಪನ್ಮೂಲವಿಲ್ಲದೆ, ಇಷ್ಟಾದರೂ ಬೆಳೆಸಲು ಸಾಧ್ಯವಾಯಿತೆಂಬ ಸಮಾಧಾನ ನನಗಿದೆ. ಸದಸ್ಯತ್ವ ಮತ್ತು ದತ್ತಿ ಕೊಡುಗೆಗಳಿಂದ ಬಂದ ಹಣವನ್ನು (ಸುಮಾರು ೨ ಕೋಟಿಗೂ ಹೆಚ್ಚು) ಪೂರ್ಣವಾಗಿ ಅಧಿಕೃತ ಬ್ಯಾಂಕಿನಲ್ಲಿ ಶಾಶ್ವತ ಠೇವಣಿಯಾಗಿ ಇಡಲಾಗಿದೆ. ಸರ್ಕಾರದಿಂದ (ಮಧ್ಯೆ ಎರಡು–ಮೂರು ವರ್ಷಗಳ ಹೊರತಾಗಿ) ಯಾವುದೇ ಶಾಶ್ವತ ಅನುದಾನವಿಲ್ಲ. ಇದಕ್ಕಾಗಿ ಪಟ್ಟ ಪ್ರಯತ್ನ ಇನ್ನೂ ಫಲ ಕಂಡಿಲ್ಲ.

ಸದಸ್ಯ ಸಂಖ್ಯೆ, ಆಸ್ತಿ–ಪಾಸ್ತಿಗಳನ್ನು ಬಿಟ್ಟರೆ, ಉಳಿದಂತೆ ಕನ್ನಡ ಸಾಹಿತ್ಯ ಪರಿಷತ್ತಿನಷ್ಟೇ ಕಾರ್ಯವಿಸ್ತಾರ ಹೊಂದಿರುವ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತನ್ನು ರಾಜ್ಯ ಸರ್ಕಾರ ಶಾಶ್ವತ ಅನುದಾನ ಸಂಹಿತೆಗೆ ಒಳಪಡಿಸದಿರುವುದು ನಿಜಕ್ಕೂ ವಿಷಾದಕರ. ಈಗಲಾದರೂ ಸರ್ಕಾರ ಈ ಬಗೆಗೆ ಗಮನಕೊಡುವುದೆಂದು ನಾನು ನಿರೀಕ್ಷಿಸಿದ್ದೇನೆ.

ಪರಿಷತ್ತಿನ ಹೆಸರಿನಲ್ಲಿ ಇದುವರೆಗೆ ನಡೆದಿರುವ ಬಹುತೇಕ ಕಾರ್ಯಕ್ರಮಗಳು, ಪ್ರಕಟಣೆಗಳು ಕೇವಲ ಶರಣ ಸಾಹಿತ್ಯ–ಸಂಸ್ಕೃತಿಗಳ ಅಭಿಮಾನಿಗಳ ಕೊಡುಗೆಯಿಂದಲೇ ನಡೆದಿವೆ. ಹಾಗೆಯೇ, ಇತರ ಸಾಂಸ್ಕೃತಿಕ ಸಂಸ್ಥೆಗಳು, ವಿಶ್ವವಿದ್ಯಾಲಯಗಳು, ಅಕಾಡೆಮಿಗಳು, ಖಾಸಗಿ ಸಂಘಗಳು ಮತ್ತು ಕೆಲವು ಮಠಗಳ ಸಹಯೋಗ ಪಡೆಯಲು ಸಾಧ್ಯವಾದ್ದರಿಂದ, ರಾಜ್ಯ ಮತ್ತು ರಾಷ್ಟ್ರಮಟ್ಟದ ಅನೇಕ ಸಮ್ಮೇಳನಗಳು, ಚಿಂತನ ಸಂಕಿರಣಗಳು, ಶಿಬಿರಗಳು, ಸಮಾವೇಶಗಳು, ಪ್ರಶಸ್ತಿ ಪ್ರದಾನಗಳನ್ನು ಯಶಸ್ವಿಯಾಗಿ ನಡೆಸಲು ಸಾಧ್ಯವಾಗಿದೆ.

ಪರಿಷತ್ತು ಇದುವರೆಗೆ ಇಷ್ಟಾದರೂ ಸೇವೆ ಸಲ್ಲಿಸಲು ಅವಕಾಶವಾದದ್ದು, ಅದು ರಾಜ್ಯದ ರಾಜಧಾನಿ ಬೆಂಗಳೂರಿನಲ್ಲಿ ತನ್ನದೇ ಆದ ಕಾರ್ಯಾಲಯವನ್ನು ನಡೆಸಲು



ಸುತ್ತೂರಿನ ಜೆ.ಎಸ್.ಎಸ್. ಮಹಾವಿದ್ಯಾಪೀಠ ಬೆಂಗಳೂರಿನಲ್ಲಿರುವ ತನ್ನ ಶೈಕ್ಷಣಿಕ ಕೇಂದ್ರದ ಆವರಣದಲ್ಲೇ ಸ್ಥಳಾವಕಾಶ ಕಲ್ಪಿಸಿಕೊಟ್ಟದ್ದು. ಇದಕ್ಕಾಗಿ ನಾವು ಜೆ.ಎಸ್.ಎಸ್. ಮಹಾವಿದ್ಯಾಪೀಠಕ್ಕೆ ಎಷ್ಟು ಋಣಿಗಳಾಗಿದ್ದರೂ ಸಾಲದು.

ಪರಿಷತ್ತಿನ ಸೇವಾ ಹಾದಿಯ ಒಂದು ಗಮನಾರ್ಹ ಮೈಲಿಗಲ್ಲೆಂದರೆ, ಮಹಿಳೆಯರಿಗಾಗಿಯೇ ಸ್ಥಾಪಿತವಾದ 'ಕದಳಿ ಮಹಿಳಾ ವೇದಿಕೆ'. ಈ ವೇದಿಕೆಗಳು ಪರಿಷತ್ತಿನ ಎಲ್ಲಾ ಕ್ಷೇತ್ರ ಘಟಕಗಳ ಅವಿಭಾಜ್ಯ ಅಂಗಗಳಾಗಿ, ಒಳ್ಳೆಯ ಚಟುವಟಿಕೆಗಳನ್ನು ನಡೆಸುತ್ತಿವೆ. ಹಾಗೆಯೇ ನನ್ನ ಪರಿಕಲ್ಪನೆಯ ಯುವ ವೇದಿಕೆ ಮತ್ತು ಮಕ್ಕಳ ವೇದಿಕೆಗಳ ರಚನೆಯನ್ನು ನಾನು ಪೂರ್ಣಗೊಳಿಸಲಾಗಲಿಲ್ಲ.

ಇನ್ನು ಪರಿಷತ್ತಿನ ಇದುವರೆಗಿನ ಸಾಧನೆಯ ವರದಿಯನ್ನೇನೂ ನಾನಿಲ್ಲಿ ಕೊಡುತ್ತಿಲ್ಲ. ಇಷ್ಟಂತೂ ಸತ್ಯ: ಒಂದು ಸಾಂಸ್ಕೃತಿಕ ಧ್ಯೇಯೋದ್ದೇಶ ಹೊಂದಿರುವ ಪರಿಷತ್ತನ್ನು ಯಾವುದೇ ಗದ್ದಲ–ಗೊಂದಲಗಳಿಗೆ ಅವಕಾಶ ಕೊಡದೆ, ಅದನ್ನು ಒಂದು ಗಂಭೀರ ಸ್ವಯಂ ಸೇವಾ ಸಂಸ್ಥೆಯಾಗಿ ಉಳಿಸಿಕೊಂಡು ಬರಲಾಗಿದೆ ಎಂಬ ತೃಪ್ತಿ ನನಗಿದೆ.

ಮಾಡುವ ಕೆಲಸವನ್ನು ಮನಮುಟ್ಟಿ, ತನುಮುಟ್ಟಿ ಮಾಡಿದ ಮಹಾನುಭಾವಿ ಬಸವಣ್ಣನವರ ಒಂದು ವಚನದೊಂದಿಗೆ ನನ್ನ ಈ ಕೊನೆಯ ಮಾತುಗಳಿಗೆ ತೆರೆ ಎಳೆಯುತ್ತೇನೆ.

**ಕರ್ತನಟ್ಟಿದಡೆ ಮರ್ತ್ಯದಲ್ಲಿ ಮಹಾಮನೆಯ ಕಟ್ಟಿದೆ**
**ಸತ್ಯ ಶರಣರಿಗೆ ತೊತ್ತು ಭೃತ್ಯನಾಗಿ ಸವೆದು ಬದುಕಿದೆನು**
**ಕರ್ತನ ಬೆಸನು ಮುಗಿದು ಮತ್ತೆ ಬರಲೆಂದಟ್ಟಿದಡೆ**
**ಕೂಡಲಸಂಗಮದೇವಾ ನಿಮ್ಮ ನಿರೂಪಕ್ಕೆ ಮಹಾ ಪ್ರಸಾದವೆಂಬೆನು!**

ಇದು ಬದುಕಿಗೆ ವಿದಾಯ ಹೇಳಲು ಇರಬೇಕಾದ ಮಾನಸಿಕ ಸಿದ್ಧತೆ. ಮಾಡಬೇಕಾದ ಅಥವಾ ಮಾಡಬಹುದಾದ ಕೆಲಸವನ್ನು ಮಾಡಿ ಮುಗಿಸಿದಾಗ ಉಂಟಾಗುವ ತೃಪ್ತಿ ಅನಿರ್ವಚನೀಯ. ನಾನು ಆ ತೃಪ್ತಿ ಅನುಭವಿಸಿದ್ದೇನೆ. ಈ 'ವಿದಾಯ'ವೂ ನನ್ನ ಪಾಲಿಗೆ 'ಮಹಾ ಪ್ರಸಾದವೇ'!

ಪರಿಷತ್ತಿನ ಸಮಸ್ತ ಬಂಧುಗಳಿಗೂ, ನಿರೀಕ್ಷೆಗೆ ಮೀರಿದ ಪ್ರಮಾಣದಲ್ಲಿ ದತ್ತಿಗಳನ್ನು ಸ್ಥಾಪಿಸಿರುವ ದಾನಿಗಳಿಗೂ, ಪರಿಷತ್ತಿನ ಸರ್ವಸದಸ್ಯರಿಗೂ ಮತ್ತೊಮ್ಮೆ ಕೃತಜ್ಞತಾಪೂರ್ವಕ ಪ್ರಣಾಮಗಳನ್ನು ಅರ್ಪಿಸುತ್ತೇನೆ.

**– ಗೊ.ರು. ಚನ್ನಬಸಪ್ಪ**

**ಲೋಕದಂತೆ ಬಾರರು, ಲೋಕದಂತೆ ಇರರು,**
**ಲೋಕದಂತೆ ಹೋಗರು, ನೋಡಯ್ಯಾ.**
**ಪುಣ್ಯದಂತೆ ಬಪ್ಪರು, ಜ್ಞಾನದಂತೆ ಇಪ್ಪರು,**
**ಮುಕ್ತಿಯಂತೆ ಹೋಹರು, ನೋಡಯ್ಯಾ.**
**ಉರಿಲಿಂಗದೇವಾ,**
**ನಿಮ್ಮ ಶರಣರು ಉಪಮಾತೀತರಾಗಿ**
**ಉಪಮಿಸಬಾರದು.**

# ಅಲ್ಲಮ ಪ್ರಭು ಮತ್ತು ಮಾಯೆ

**ಡಾ. ಎನ್.ಜಿ. ಮಹದೇವಪ್ಪ**

*'ಚೈತನ್ಯ', ಐದನೆಯ ಅಡ್ಡರಸ್ತೆ,*
*ಕಲ್ಯಾಣ ನಗರ, ಧಾರವಾಡ - ೫೮೦ ೦೦೭*
*ದೂರವಾಣಿ: ೯೪೮೩೯೬೭೮೩೯*

ಅಲ್ಲಮ ಪ್ರಭು ತನ್ನ ವಚನಗಳಲ್ಲಿ ಮಾಯೆ ಎಂಬ ಪದವನ್ನು ಆಗಾಗ್ಗೆ ಬಳಸುತ್ತಾನೆ ಎಂಬುದು ಅವನ ವಚನಗಳನ್ನು ಓದಿದವರಿಗೆಲ್ಲಾ ಗೊತ್ತು. ಇದು ಕೆಲವರನ್ನು 'ಅಲ್ಲಮ ಒಬ್ಬ ಶಂಕರಾಚಾರ್ಯರಂಥ ಅದ್ವೈತಿ' ಎಂದು ತೀರ್ಮಾನಿಸಲು ಪ್ರಚೋದಿಸಿದೆ; ಮತ್ತೆ ಕೆಲವರನ್ನು ಅಲ್ಲಮ ದಾರ್ಶನಿಕವಾಗಿ ಇತರ ವಚನಕಾರರಿಗಿಂತ ಭಿನ್ನ ಎಂದೂ, ಮತ್ತೆ ಕೆಲವರನ್ನು ಅವನನ್ನು ಲಿಂಗಾಯತ ಅಥವಾ ಮಾತ್ತಾವುದೇ ದಾರ್ಶನಿಕ ಪಂಥದ ಚೌಕಟ್ಟಿನೊಳಗಿಡಲು ಸಾಧ್ಯವಿಲ್ಲ ಎಂದೂ ತೀರ್ಮಾನಿಸುವಂತೆ ಪ್ರಚೋದಿಸಿದೆ. ಅಲ್ಲಮನ ವಚನಗಳನ್ನು ವಿಶ್ಲೇಷಿಸಿ ಇವುಗಳಿಗಿಂತ ಬೇರೊಂದು ರೀತಿಯ ತೀರ್ಮಾನಕ್ಕೆ ಬರಲು ಸಾಧ್ಯವೇ ಎಂಬುದನ್ನು ಪರೀಕ್ಷಿಸುವುದು ಲೇಖನದ ಉದ್ದೇಶ.

ಶಂಕರರ ಪ್ರಕಾರ ಅನಂತವಾದ ನಿರ್ಗುಣ ನಿರಾಕಾರ ಬ್ರಹ್ಮ ಮಾತ್ರ ಸತ್ಯ. ಗಿಡಮರಗಳನ್ನೂ ಮನುಷ್ಯ ಪ್ರಾಣಿಗಳನ್ನೂ ಒಳಗೊಂಡ ಜಡಜಗತ್ತು ಅವರ ಪ್ರಕಾರ ಮಾಯೆ. ಮಾಯೆ ಎಂಬ ಪದವನ್ನು ಶಂಕರರು ಅನೇಕ ಅರ್ಥಗಳಲ್ಲಿ ಬಳಸುತ್ತಾರೆ. ೧. ಸಾಂಖ್ಯರು ಪ್ರಕೃತಿ ಎಂಬ ಪದವನ್ನು ಯಾವ ಅರ್ಥದಲ್ಲಿ ಬಳಸುತ್ತಾರೋ ಆ ಅರ್ಥದಲ್ಲಿಯೇ ಶಂಕರರು ಮಾಯೆ ಎಂಬ ಪದವನ್ನು ಬಳಸುತ್ತಾರೆ. ಸಾಂಖ್ಯರ ಪ್ರಕಾರ ಪ್ರಕೃತಿಯು ಜಗತ್ತಿನ ಮೂಲ ಕಾರಣ. ಅದರಿಂದಲೇ ಜಡ ವಸ್ತುಗಳೂ ಪ್ರಾಣಿಗಳ ದೇಹೇಂದ್ರಿಯಾದಿಗಳೂ ಉತ್ಪತ್ತಿಯಾಗುತ್ತವೆ. ಅಂದರೆ ಶಂಕರರಿಗೆ ಜಗತ್ತಿಗೆ ಮಾಯೆಯೇ ಮೂಲ ಕಾರಣ. ೨. ಮಾಯೆ (ಜಗತ್ತು) ಶಂಕರರ ಪ್ರಕಾರ ಸತ್ಯವೂ ಅಲ್ಲ, ಅಸತ್ಯವೂ ಅಲ್ಲ, ಮಿಥ್ಯೆ. ಬಂಜೆಯ ಮಗ, ಗಗನ ಕುಸುಮ ಯಾವತ್ತೂ ಅಸ್ತಿತ್ವದಲ್ಲಿಲ್ಲ. ಅವು ಕೇವಲ ಅಭಾವರೂಪದ ಕಲ್ಪನೆಗಳು. ಆದುದರಿಂದ ಅವು ಅಸತ್ಯ. ಆದರೆ ಜಗತ್ತು ಭಾವರೂಪದ ಮಾಯೆ. ಅದಕ್ಕೆ ಅಸ್ತಿತ್ವವಿದೆ. ಜಗತ್ತಿನಲ್ಲಿಯೇ ಇದ್ದು, ಅದರೊಡನೆ ನಿತ್ಯವೂ ವ್ಯವಹರಿಸುವುದರಿಂದ ನಾವು ಅದನ್ನು ಅಸತ್ಯ ಎಂದು ಪರಿಗಣಿಸಲು ಬರುವುದಿಲ್ಲ. ಆದರೆ ಅದು ಸತ್ಯವೂ ಅಲ್ಲ. ಬ್ರಹ್ಮ ಮಾತ್ರ ಸತ್ಯ. ಜಡ ಜಗತ್ತೂ ಸತ್ಯ ಎಂದರೆ ಬ್ರಹ್ಮನಲ್ಲದೆ ಮತ್ತೊಂದು ಸತ್ಯವಿದೆ ಎಂದಾಗುತ್ತದೆ. ಆಗ ಅದ್ವೈತಕ್ಕೆ ಧಕ್ಕೆಯಾಗುತ್ತದೆ. ಹೀಗೆ, ಮಾಯೆ (ಪ್ರಕೃತಿ ಅಥವಾ ಪ್ರಕೃತಿಯಿಂದಾದ ಜಗತ್ತು) ಸತ್ಯವೂ ಅಲ್ಲದ, ಅಸತ್ಯವೂ ಅಲ್ಲದ ಒಂದು ವಿಲಕ್ಷಣವಾದ, ಏನೆಂದು



ನಿರ್ಣಯಿಸಲಾಗದ ವಸ್ತು (ಸದಸದ್ವಿಲಕ್ಷಣ, ಅನಿರ್ವಚನೀಯ). ಇದನ್ನು ವರ್ಣಿಸಲು ಶಂಕರರು ಮಿಥ್ಯೆ ಎಂಬ ಪದ ಬಳಸುತ್ತಾರೆ. ೩. ಸಾಂಖ್ಯರು ಪ್ರಕೃತಿಯನ್ನು ಒಂದು ಸ್ವತಂತ್ರ ಅಸ್ತಿತ್ವವುಳ್ಳ ಸತ್ತೆ ಎಂದು ಪರಿಭಾವಿಸಿದರೆ, ಶಂಕರರು ಅದು ಸ್ವತಂತ್ರ ಅಸ್ತಿತ್ವವಿಲ್ಲದ ವ್ಯಾವಹಾರಿಕ ಸತ್ತೆ ಎಂದು ಪರಿಭಾವಿಸುತ್ತಾರೆ. ಬ್ರಹ್ಮ ಮಾತ್ರ ಸತ್ಯ, ಜಗತ್ತು ಮಿಥ್ಯೆಯಾದರೂ, ಅದು ಕಲ್ಪನೆಯಲ್ಲ. ಹಗ್ಗವು ಕತ್ತಲೆಯಲ್ಲಿ ಅಥವಾ ದೃಷ್ಟಿದೋಷದಿಂದಾಗಿ ಹಾವಿನಂತೆ ಕಾಣುತ್ತದೆ. ಆದರೆ ಹಾವು ನಮ್ಮ ಸೃಷ್ಟಿಯಲ್ಲ. ಅದಕ್ಕೆ ಹಗ್ಗ ಎಂಬ ಆಶ್ರಯ ಅಥವಾ ಅಧಿಷ್ಠಾನವಿದೆ. ಹಗ್ಗವೇ ಇಲ್ಲದಿದ್ದರೆ, ಹಾವು ಎಂಬ ಭ್ರಮೆಯೂ ಇರುವುದಿಲ್ಲ. ಹಾಗೆಯೇ ಅವಿದ್ಯೆಯಿಂದಾಗಿ ಬ್ರಹ್ಮನು ಜಗತ್ತಿನಂತೆ ತೋರುತ್ತಾನೆ. ಈ ತೋರಿಕೆ ನಮ್ಮ ಇಚ್ಛಾಪೂರ್ವಕ ಸೃಷ್ಟಿಯಲ್ಲ; ಕನಸಿನ ವಸ್ತುವಿನಂತೆಯೂ ಅಲ್ಲ. ಕನಸಿನ ವಸ್ತುಗಳಿಗೆ ಆಶ್ರಯ ಅಥವಾ ಅಧಿಷ್ಠಾನವಿಲ್ಲ. ಆದರೆ ಬ್ರಹ್ಮನೇ ಜಗತ್ತು ಎಂಬ ತೋರಿಕೆಗೆ ಅಧಿಷ್ಠಾನ. ಬ್ರಹ್ಮ ಇಲ್ಲದಿದ್ದರೆ ಜಗತ್ತು ಎಂಬ ವಿವರ್ತವೂ (ತೋರಿಕೆಯೂ) ಇರುವುದಿಲ್ಲ. ಅಂದರೆ ಮಾಯೆಗೆ (ಪ್ರಕೃತಿಗೆ) ಸ್ವತಂತ್ರ ಅಸ್ತಿತ್ವವಿಲ್ಲ. ನಾವು ಹಾವನ್ನು ಸೃಷ್ಟಿಸಲಿಲ್ಲ, ಅದು ವಾಸ್ತವವಾಗಿ ಅಲ್ಲಿ ಇರಲೇ ಇಲ್ಲ. ಅದೇ ರೀತಿ, ಜಗತ್ತನ್ನು ಬ್ರಹ್ಮನು ಸೃಷ್ಟಿಸಲಿಲ್ಲ. ಅದು ಇರಲೇ ಇಲ್ಲ, ಕೇವಲ ಇರುವಂತೆ ಭಾಸವಾಯಿತು, ಅಷ್ಟೇ. ಇಲ್ಲದ ಜಗತ್ತು ಇರುವಂತೆ ಕಾಣುವುದು ಕೇವಲ ತೋರಿಕೆ, ಸತ್ಯವಾದುದಲ್ಲ. ಬ್ರಹ್ಮನು ನಿರ್ಗುಣನಾದುದರಿಂದ ಜಗತ್ತನ್ನು ಸೃಷ್ಟಿಸುವ ಗುಣವೂ ಸೃಷ್ಟಿಸಬೇಕೆಂಬ ಇಚ್ಛೆಯೂ ಅವನಲ್ಲಿರಲಿಲ್ಲ. ೪. ಹತ್ತಿರದಿಂದ ನೋಡಿದಾಗ ನಾವು ಯಾವುದನ್ನು ಹಾವು ಎಂದು ತಿಳಿದುಕೊಂಡಿದ್ದೆವೋ ಅದು ಹಗ್ಗ ಎಂಬುದು ಗೊತ್ತಾಗುತ್ತದೆ. ಅದೇ ರೀತಿ, ಅನಾದಿಯಾದ ಅವಿದ್ಯೆಯಿಂದಾಗಿ ಜಡವಲ್ಲದ, ಕೇವಲ ಚಿನ್ಮಯನಾದ ಬ್ರಹ್ಮನು ಜಡಜಗತ್ತಿನಂತೆ ಕಾಣುತ್ತಾನೆ. ಆದರೆ ಅವಿದ್ಯೆಯನ್ನು ಕಳೆದುಕೊಂಡು ಬ್ರಹ್ಮಜ್ಞಾನ ಪಡೆದಾಗ ನಮಗೆ ಚಿನ್ಮಯನಾದ ಬ್ರಹ್ಮ ಮಾತ್ರ ಕಾಣುತ್ತದೆ, ಮಾಯೆ (ಜಡಜಗತ್ತು) ಕಾಣುವುದಿಲ್ಲ. ಬ್ರಹ್ಮಜ್ಞಾನ ಉಂಟಾದವರಿಗೆ ಜಗತ್ತು ಇಲ್ಲವಾಗುತ್ತದೆ. ಈ ಪರಿಶೀಲನೆಯಿಂದ, ಶಂಕರರು ಮಾಯೆ, ಜಗತ್ತು, ಪ್ರಕೃತಿ, ಅವಿದ್ಯೆ, ಅಜ್ಞಾನ, ಆಭಾಸ, ಅಧ್ಯಾಸ, ಮುಂತಾದ ಪದಗಳನ್ನು ಸಮಾನಾಂತರವಾಗಿ ಬಳಸುತ್ತಿದ್ದಾರೆ ಎಂದು ಖಚಿತವಾಗುತ್ತದೆ.

ಜಗತ್ತಿನ ಬಗೆಗಿನ ಈ ಅಭಿಪ್ರಾಯ ಅಲ್ಲಮನಲ್ಲೂ ಇದ್ದರೆ ಅವನು ಶಾಂಕರ ಅದ್ವೈತಿ, ಅಲ್ಲದಿದ್ದರೆ ಅಲ್ಲ. ವಾಸ್ತವ ಏನೆಂದರೆ, ಅವನೇ ತನ್ನ ವಚನವೊಂದರಲ್ಲಿ (೨/೮೫) ಅದ್ವೈತವನ್ನೂ, ಬ್ರಹ್ಮವನ್ನೂ ನುಡಿದು ಭ್ರಮಿತನಾದೆ, ಬಸವಣ್ಣನಿಂದಾಗಿ ಭಕ್ತನಾದೆ, ಎನ್ನುತ್ತಾನೆ. ಆದುದರಿಂದ, ಅವನ ವಚನಗಳಲ್ಲಿ ಪದೇ ಪದೇ ಬಳಸಲಾಗಿರುವ ಮಾಯೆ, ಅದ್ವಯ, ಅದ್ವೈತ ಎಂಬ ಪದಗಳನ್ನು ನಾವು ಎಚ್ಚರಿಕೆಯಿಂದ ವಿಶೇಷಿಸಿದರೆ ಅವು ಶಾಂಕರ ಅದ್ವೈತದ ರೀತಿಯಲ್ಲಿ ಬಳಕೆಯಾಗಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ಜೊತೆಗೆ ಅವನ ಜಗತ್ತಿನ ಪರಿಕಲ್ಪನೆಯನ್ನೂ ಇತರ ವಚನಕಾರರ ಜಗತ್ತಿನ ಪರಿಕಲ್ಪನೆಯನ್ನೂ ಹೋಲಿಸಿದರೆ ಅಲ್ಲಿ ಶಾಂಕರ ಮಾಯಾವಾದಕ್ಕೆ ಸ್ಥಾನವಿಲ್ಲ ಎಂಬುದೂ ಸ್ಪಷ್ಟವಾಗುತ್ತದೆ.

ವಚನಕಾರರ ಪ್ರಕಾರ ಮೊದಲು ಲಿಂಗ ಒಂದೇ ಇತ್ತು; ಅದು ನಿರ್ಗುಣ, ನಿರಾಕಾರವಾಗಿತ್ತು; ಅದು ಏನನ್ನೂ ಕುರಿತು ಚಿಂತಿಸುವಂತಿರಲಿಲ್ಲ, ಏಕೆಂದರೆ ಚಿಂತಿಸಲ್ಪಡಲು

ಏನೂ ಇರಲಿಲ್ಲ. ಅದಕ್ಕೆ ಸ್ವಪ್ರಜ್ಞೆ ಸಹಾ ಇರಲಿಲ್ಲ. ಅಂಥ ಸ್ಥಿತಿಯ ಲಿಂಗಕ್ಕೆ ವಚನಕಾರರು ಶೂನ್ಯ, ಬಯಲು, ಮುಂತಾದ ಹೆಸರುಗಳನ್ನು ಕೊಟ್ಟಿದ್ದಾರೆ. ಇಷ್ಟರವರೆಗೆ ಈ ಪರಿಕಲ್ಪನೆ ಶಂಕರರ ನಿರ್ಗುಣ, ನಿರಾಕಾರ ಬ್ರಹ್ಮನ ಪರಿಕಲ್ಪನೆಯನ್ನೇ ಹೋಲುತ್ತದೆ. ಶಂಕರರ ನಿರ್ಗುಣ ಬ್ರಹ್ಮನಲ್ಲಿ ಸೃಷ್ಟಿಸಬೇಕೆಂಬ ಇಚ್ಛೆ ಹುಟ್ಟುವುದೆ ಇಲ್ಲ. ಆದರೆ ಅಲ್ಲಮನ ಶೂನ್ಯಲಿಂಗದಲ್ಲಿ ಸೃಷ್ಟಿಸಬೇಕೆಂಬ ಇಚ್ಛೆಯುಂಟಾಗುತ್ತದೆ. ಆಗ ಅದರಲ್ಲಿಯೇ ಇದ್ದ ಶಕ್ತಿಯಲ್ಲಿ ಚಲನೆ ಉಂಟಾಗಿ ಅದು ಜಗತ್ತಿನ ನಾನಾ ವಸ್ತುಗಳಾಗಿ ರೂಪಾಂತರಗೊಳ್ಳುತ್ತದೆ. ಅಲ್ಲಮ ಒಂದು ಉಪಮೆಯ ಮೂಲಕ ಇದನ್ನು ಸ್ಪಷ್ಟಪಡಿಸುತ್ತಾನೆ: ಮರಗಳು ಹೇಗೆ ನಿರ್ದಿಷ್ಟ ಋತುವಿನಲ್ಲಿ ಪಲ್ಲವಿಸಿ, ಹೂ ಹಣ್ಣು ಇತ್ಯಾದಿಗಳಾಗುತ್ತವೆಯೋ ಹಾಗೆ, ಹರನ ಇಚ್ಛೆಯ ಪ್ರಕಾರ ಶಕ್ತಿಯು ಜಗತ್ತಿನ ನಾನಾ ವಸ್ತುಗಳಾಗಿ ರೂಪಾಂತರಗೊಳ್ಳುತ್ತದೆ (ವ.೧೪೫). ಹೀಗೆ ಹರನೇ (ಲಿಂಗನೇ) ತನ್ನ ಇಚ್ಛೆಯಿಂದ ಸೃಷ್ಟಿಸಿರುವ ಜಗತ್ತು ಮಾಯೆ ಅಥವಾ ಮಿಥ್ಯೆ ಆಗಿರದೆ ಸತ್ಯವೇ ಆಗಿದೆ. ಅದು ಪ್ರಳಯಕ್ಕೆ ಒಳಗಾಗುವ ತನಕವಾದರೂ ಇರುತ್ತದೆ; ಎಂದಿಗೂ ಕೇವಲ ತೋರಿಕೆಯಲ್ಲ. ಹೀಗೆಂದು ಇತರ ವಚನಕಾರರೂ ನಂಬುತ್ತಾರೆ.

ಶಿವಶಕ್ತಿಯ ವಿಕಾಸವಾದ ಜಗತ್ತು ಲಿಂಗದಿಂದ ಹೊರಗಿಲ್ಲ, ಅದು ಲಿಂಗದಲ್ಲಿಯೇ ಅಂತಸ್ಥವಾಗಿದೆ ಹಾಗೂ ಲಿಂಗ ಜಗತ್ತಿನಲ್ಲಿ ಪೂರ್ಣವಾಗಿ ವ್ಯಾಪಿಸಿಕೊಂಡಿದೆ. ಇದನ್ನೆ ವಚನಕಾರರು 'ಲಿಂಗಮಧ್ಯೇ ಜಗತ್ ಸರ್ವಂ' ಎಂದಿದ್ದಾರೆ. ಇದನ್ನು ಒಂದು ಉಪಮೆಯೊಂದಿಗೆ ವಿವರಿಸಬಹುದು: ಒಂದು ಕೊಡವನ್ನು ಸಮುದ್ರದಲ್ಲಿ ಮುಳುಗಿಸಿದಾಗ ಅದು ಸಮುದ್ರದಲ್ಲಿರುತ್ತದೆ ಹಾಗೂ ಸಮುದ್ರದ ನೀರು ಅದರೊಳಗಿರುತ್ತದೆ. ಅದೇ ರೀತಿ ಜಗತ್ತು ಲಿಂಗದಲ್ಲಿಯೂ ಲಿಂಗವು ಆ ಜಗತ್ತಿನಲ್ಲಿಯೂ ಲಿಂಗವೂ ಇರುತ್ತವೆ. ನಾವು ಜಗತ್ತನ್ನು ನಮ್ಮ ಹೊರಗಿರುವಂತೆ, ನಮ್ಮ ಆಲೋಚನೆ, ಕೋಪತಾಪ, ಮುಂತಾದ ಮಾನಸಿಕ ಸ್ಥಿತಿಗಳು ನಮ್ಮ ಒಳಗಿರುವಂತೆ ಕಾಣುತ್ತೇವೆ. ಜಗತ್ತು ಲಿಂಗದ ಒಳಗೇ ಇರುವುದರಿಂದ, ಲಿಂಗವು ಜಗತ್ತನ್ನು ತನ್ನ ಒಳಗಿರುವಂತೆ ವೀಕ್ಷಿಸುತ್ತದೆ.

ಒಬ್ಬ ವ್ಯಕ್ತಿ ಅನುಭಾವಿಯಾದರೆ, ವಚನಕಾರರ ಪ್ರಕಾರ ಅವನು ತನ್ನನ್ನು ಲಿಂಗದೊಂದಿಗೆ ತಾದಾತ್ಮ್ಯ ಮಾಡಿಕೊಳ್ಳುತ್ತಾನೆ. ಮೊದಲಿದ್ದ ಅವನ ಮರೆವು ಇಲ್ಲವಾಗಿ, ಅವನಲ್ಲಿ ತಾನು ಪ್ರತ್ಯೇಕ ವ್ಯಕ್ತಿಯಲ್ಲ, ತನಗೂ ಲಿಂಗಕ್ಕೂ ಭೇದವಿಲ್ಲ, ತಾನೇ ಲಿಂಗ ಎಂಬ ಅನುಭೂತಿ ಉಂಟಾಗುತ್ತದೆ. ಶಾಂಕರ ಅದ್ವೈತಿಗೆ ಅನುಭಾವ ಉಂಟಾದರೆ ಅವನು ಜಗತ್ತನ್ನು ಕಾಣದೆ, ಕೇವಲ ನಿರ್ಗುಣ ಬ್ರಹ್ಮನನ್ನು ಕಂಡರೆ, ಲಿಂಗಾಯತ ಅನುಭಾವಿಯು ಜಗತ್ತನ್ನೂ ಕಾಣುತ್ತಾನೆ, ಅದರಲ್ಲಿರುವ ಲಿಂಗವನ್ನೂ ಕಾಣುತ್ತಾನೆ. ಲಿಂಗಾಯತ ಅನುಭಾವಿಗೆ ತಾನು ಮತ್ತು ಲಿಂಗ ಎಂಬ ಭೇದ ಇಲ್ಲವಾದಂತೆ, ತಾನು ಮತ್ತು ಜಗತ್ತು ಎಂಬ ಭೇದವೂ ಇಲ್ಲವಾಗುತ್ತದೆ. ಅವನ ಪ್ರಕಾರ ತಾನು, ಲಿಂಗ, ಜಗತ್ತು –ಇವು ಮೂರೂ ಭೇದವಿಲ್ಲದ ಒಂದು.

ಈಗ, "ಲಿಂಗದೊಂದಿಗೆ ತನ್ನನ್ನು ಏಕೀಕರಿಸಿಕೊಳ್ಳುವ ಅನುಭಾವಿಯು ಮತ್ತೊಬ್ಬ ಸೃಷ್ಟಿಕರ್ತ, ಲಯಕರ್ತ, ಇತ್ಯಾದಿ ಆಗುತ್ತಾನೆಯೆ?" ಎಂದು ಕೆಲವರು ಆಕ್ಷೇಪಿಸಬಹುದು. ಇದಕ್ಕೆ ಅನುಭಾವಿಯು ಈ ಉತ್ತರ ಕೊಡಬಲ್ಲ: ಅನುಭಾವಿಯು ಮತ್ತೊಬ್ಬ ಸೃಷ್ಟಿಕರ್ತನಾದ ಲಿಂಗ ಆಗುವುದಿಲ್ಲ; ಅದು ಅಸಾಧ್ಯ ಮತ್ತು ಅಚಿಂತ್ಯ ಕೂಡ. ಅವನು ತಾನೆಂಬ ಪ್ರತ್ಯೇಕತಾ



(ಅಂಗ) ಭಾವವನ್ನು ಕಳೆದುಕೊಂಡು ತಾನೇ ಲಿಂಗ ಎಂದು ಭಾವಿಸಿಕೊಂಡಾಗ ಲಿಂಗನು ಹೇಗೆ ಜಗತ್ತು ತನ್ನ ಒಳಗೆ ಇದೆ ಎಂದು ಪರಿಭಾವಿಸುತ್ತಾನೋ ಹಾಗೆ ಲಿಂಗವೇ ಆದ ಅನುಭಾವಿಯು ಜಗತ್ತು ತನ್ನ ಒಳಗೇ ಇದೆ ಎಂದು ಪರಿಭಾವಿಸುತ್ತಾನೆ. ಇದಕ್ಕೆ ಅಲ್ಲಮನ ಕೆಲವು ವಚನಗಳು ಸಾಕ್ಷಿ. ಪರಿಕಲ್ಪನೆಯು ಒಂದು ಆಕ್ಷೇಪಣೆಗೆ ಉತ್ತರವಾಗಬಲ್ಲುದು.

೧. ಹದಿನಾಲ್ಕು ಭುವನ ಒಬ್ಬ ಶರಣನ ಕುಕ್ಷಿಯೊಳಗು . . . (೨/೬೯)

೨. ಇಹಲೋಕ ಪರಲೋಕ ತಾನಿರ್ದಲ್ಲಿ . . . (೨/೩೭೦).

೩. ಅಹಂಕಾರವನೆ ಮರೆದು, ದೇಹಗುಣಂಗಳನೆ ಜರೆದು,
ಇಹ ಪರವು ತಾನೆಂದರಿದ ಕಾರಣ,
ಸೋಹಂ ಭಾವ ಸ್ಥಿರವಾಯಿತ್ತು . . . (೨/೪೦೧)

೪. ದ್ರವ್ಯ ನೀನು ದ್ರವ್ಯಾರ್ಥ ನೀನು; ಪದ ನೀನು ಪದಾರ್ಥ ನೀನು.
ಸಕಲ ನೀನು ನಿಷ್ಕಲ ನೀನು.
ಸಕಲ ನಿಷ್ಕಲಾತ್ಮಕ ಪರಿಪೂರ್ಣ ಶಿವನಲ್ಲದೆ ಅನ್ಯ ಭಿನ್ನಭಾವ ಉಂಟೆ?
ಸಕಲ ನಿಷ್ಕಲ ತತ್ವಂಗಳು ನಿಮ್ಮೊಳಗೆ ಸಮಾಸವನೆಯ್ದುವೆವೆಂದು
ತಮ್ಮ ತಮ್ಮ ಅಂಗದ ಮೇಲೆ ಸರ್ವಪದಾರ್ಥಂಗಳ ಹೆಸರಿಟ್ಟು
ಹೊತ್ತುಕೊಂಡ್ಯೆದಾವೆ ನೋಡಾ! . . . (೨/೧೨೫೩)

ಶರಣ ತನ್ನಲ್ಲಿ ಲಿಂಗವನ್ನೂ ಆ ಲಿಂಗದಲ್ಲಿ ಜಗತ್ತನ್ನೂ ಕಾಣುತ್ತಾನೆ ಎಂಬ ಪರಿಕಲ್ಪನೆ ಅಲ್ಲಮನಿಗೆ ಮಾತ್ರ ಸೀಮಿತವಾದುದಲ್ಲ. ಚೆನ್ನಬಸವಣ್ಣ (೩/೧೨೬೬) 'ತಾನೆ ಜಗ, ಜಗವೆಲ್ಲ ತಾನೆಂದರಿದ ಘನವಭೇದ್ಯನಭೇದರೂಪನಾಗಿ, ಅನ್ಯವಿಲ್ಲದನ್ಯವ ನರಿಯಲೆಲ್ಲಿಯದೊ?' ಎಂದು ಕೇಳುವಾಗ, ಅನುಭಾವಿ ತಾನು, ಜಗತ್ತು, ಲಿಂಗ ಮೂರೂ ಒಂದೇ ಎಂದು ಪರಿಭಾವಿಸುತ್ತಾನೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಿದ್ದಾನೆ. ಅದೇ ರೀತಿ, ಆದಯ್ಯನು (೬/೧೦೧೬) ಶರಣನಲ್ಲೇ ಲಿಂಗವೂ, ಲಿಂಗದಲ್ಲಿ ಜಗತ್ತೂ ಇದೆ ಎಂಬುದನ್ನು ಹೇಳುತ್ತಿದ್ದಾನೆಂಬುದು ಸ್ಪಷ್ಟವಾಗುತ್ತದೆ. ಹಾಗೆಯೇ ಬಾಲಸಂಗಯ್ಯ ಎಂಬ ವಚನಕಾರನೂ ಈ ಅಭಿಪ್ರಾಯವನ್ನು ಎತ್ತಿ ಹಿಡಿಯುತ್ತಾನೆ (೧೩/೫೮೦, ೫೮೧, ೫೮೫–೮೭).

ಇಲ್ಲಿ, ಜಗತ್ತು ಸೃಷ್ಟಿಪೂರ್ವದಲ್ಲಿಯೂ (ಅವ್ಯಕ್ತವಾಗಿ) ಶರಣನಲ್ಲೇ ಇತ್ತು ಎಂಬ ಅಲ್ಲಮ (೨/೫–೬) ಮತ್ತು ಚೆನ್ನಬಸವಣ್ಣನ (೩/೨–೬) ಅಭಿಪ್ರಾಯವನ್ನೂ ನೆನೆಪಿಸಿಕೊಳ್ಳಬೇಕು. ಅದೇ ರೀತಿ, ಎರಡನೆಯ ಅಲ್ಲಮ ಎಂದು ಪ್ರಸಿದ್ಧವಾಗಿರುವ ತೋಂಟದ ಸಿದ್ಧಲಿಂಗ ಶಿವಯೋಗಿಗಳ ". . . ಆ ನಿಃಕಲಲಿಂಗದಿಂದ ಜ್ಞಾನಚಿತ್ತು ಉದಯವಾಗಿ, ಆ ಜ್ಞಾನಚಿತ್ತುವೇ ಶರಣ ರೂಪಾಗಿ . . ." (೧೧/೩೮), ". . . ಪರಿಪೂರ್ಣ ಪ್ರಕಾಶ . . . ಸಮ್ಯಗ್‌ಜ್ಞಾನದಲ್ಲಿ ಶರಣನುತ್ಪತ್ತಿ, ಶರಣನ ಸ್ಥಿತಿ ಶರಣನ ಲಯ ಕಾಣಿಭೋ. ಆ ಸದಮಲಾನಂದ ಚಿದ್ಬ್ರಹ್ಮಾಂಡಾತ್ಮಕ ತಾನೆಂಬುದನು ಶ್ರೀ ಗುರುವಿನ ಶ್ರೀ ಮುಖದಿಂದ ಅರಿದು . . . ತಾನೆ ಮುಕ್ತನು, . . . ಶರಣನು" (೧೧/೪೪) ಎಂಬ ಮಾತುಗಳನ್ನೂ ನೆನೆಪಿಸಿಕೊಳ್ಳಬೇಕು (ಅಲ್ಲದೆ, ನೋಡಿ: ೧೧/೪೭, ೪೮, ೫೩). ಆಧ್ಯಾತ್ಮಿಕ

ಸಾಧನೆಯಿಂದಾಗಿ ಅನುಭಾವಿಯಾದ ಶರಣನಲ್ಲಿ ಜಗತ್ತು ಇರುವಂತೆ, ಇನ್ನೂ ಬಂಧನಕ್ಕೊಳಗಾಗದ (ಶುದ್ಧವಾದ) ಶರಣನಲ್ಲಿಯೂ ಅವ್ಯಕ್ತ ರೂಪದ ಜಗತ್ತು ಇದೆ ಎಂಬುದು ಇದರ ಅರ್ಥ.

ಇಲ್ಲಿ ಕೆಲವರು, "ಮನುಷ್ಯನಲ್ಲಿ ಇಡೀ ಜಗತ್ತು ಇದೆ ಎಂಬುದು ವಾಸ್ತವವಲ್ಲ, ಕೇವಲ ಕಲ್ಪನೆ ಅಥವಾ ಭ್ರಮೆ ಅಲ್ಲವೆ?" ಎಂದು ಆಕ್ಷೇಪಿಸಬಹುದು. ಇದಕ್ಕೆ ಅನುಭಾವಿ ಎರಡು ಉತ್ತರ ಕೊಡಬಹುದು. ೧. ಮನುಷ್ಯನಲ್ಲಿ ಜಗತ್ತು ಇದೆ ಎನ್ನುವುದು ಭ್ರಮೆಯಾದರೆ, ಅವನಲ್ಲಿ ಜಗತ್ತನ್ನೊಳಗೊಂಡ ಲಿಂಗವಿದೆ ಎನ್ನುವುದೂ ಭ್ರಮೆಯೇ. ಕರಿಯು ಕನ್ನಡಿಯೊಳು ಅಡಗಿದಂತೆ ಮಾನವನಲ್ಲಿ ಲಿಂಗ ದೇವ ಅಡಗುತ್ತಾನೆ, ಎನ್ನುವುದು ಎಲ್ಲ ಶರಣರ ಅಭಿಮತ. ಆದುದರಿಂದ, ಇದು ಭ್ರಮೆಯಲ್ಲ. ಇದು ಭ್ರಮೆಯಲ್ಲ ಎನ್ನುವುದಾದರೆ ಲಿಂಗವಾಗುವುದು ಎಂದರೇನರ್ಥ? ಲಿಂಗವಾಗುವುದು ಎಂದರೆ ಲಿಂಗದಂತೆ ಆಗುವುದು ಎಂದಲ್ಲ. ಮಾನವ ಲಿಂಗದಂತೆ ಆಗುತ್ತಾನೆ ಎಂದರೆ ಲಿಂಗ ಮತ್ತು ಲಿಂಗದಂತೆ ಆದ ಅನುಭಾವಿ ಇಬ್ಬರೂ ಇರುವುದು ಎಂದರ್ಥ. ಇದು ಸಾಧ್ಯವಿಲ್ಲ. ಅನುಭಾವದಲ್ಲಿ ದ್ವೈತ ಇರುವುದಿಲ್ಲ. ಲಿಂಗವಾಗುವುದು ಎಂದರೆ ತಾನು ಎಂಬ ಪ್ರತ್ಯೇಕತಾ ಭಾವವನ್ನು ಕಳೆದುಕೊಳ್ಳುವುದು ಮತ್ತು ತಾನು ಮತ್ತು ಲಿಂಗ ಒಂದೇ ಎಂದು ತಿಳಿಯುವುದು. ೨. ಉಪನಿಷತ್ಕಾರರು ಮತ್ತು ಇತರ ಭಾರತೀಯ ದಾರ್ಶನಿಕರ ಪ್ರಕಾರ ಅನುಭಾವದಲ್ಲಿ (ತುರೀಯಾವಸ್ಥೆಯಲ್ಲಿ) ಅರಿತುದು ವಿದ್ಯೆ ಅಥವಾ ಜ್ಞಾನ (ಅಥವಾ ಪರಾವಿದ್ಯೆ). ಅಂದರೆ, ಅನುಭಾವದಲ್ಲಿ ಇಂದ್ರಿಯ ಮತ್ತು ಅಂತಃಕರಣಗಳು ಆತ್ಮದೊಂದಿಗೆ ಸಂಬಂಧವನ್ನು ತಾತ್ಕಾಲಿಕವಾಗಿ ಕಡಿದುಕೊಂಡಿರುವಾಗ ಆತ್ಮ ತಾನೊಂದೆ ಉಳಿಯುತ್ತದೆ. ಆ ಶುದ್ಧ ಆತ್ಮವೇ ಪರಮಾತ್ಮ, ಬ್ರಹ್ಮ, ಜ್ಞಾನ ಅಥವಾ ವಿದ್ಯೆ. ಅಲ್ಲಮ ಪ್ರಭು ಸೇರಿ ಎಲ್ಲ ವಚನಕಾರರು ಇದನ್ನೆ ಅರಿವು ಅಥವಾ ಲಿಂಗ ಎನ್ನುತ್ತಾರೆ. ಇದನ್ನು ಅನುಭವಿಸಿದವನು ಲಿಂಗಾನುಭಾವಿ ಅಥವಾ ಶರಣ. ಜಾಗ್ರತಾವಸ್ಥೆಯಲ್ಲಿ ಉಂಟಾಗುವ ಜ್ಞಾನದಲ್ಲಿ ಜ್ಞಾತೃ ಮತ್ತು ಜ್ಞೇಯಗಳ ದ್ವೈತವಿರುವುದರಿಂದ ಅದು ಎರಡನೆ ದರ್ಜೆಯದು. ಅದು ಅವಿದ್ಯೆ ಅಥವಾ ಅಜ್ಞಾನ. ಅದು ವ್ಯಾವಹಾರಿಕವಾಗಿ ಸತ್ಯವಿರಬಹುದು, ಆದರೆ ಅದು ಮೋಕ್ಷಕಾರಕ ಅಲ್ಲ. ಆದುದರಿಂದ ಅದು ಅವಿದ್ಯೆ. ವೇದ ಮುಂತಾದವುಗಳ ಜ್ಞಾನ ಸಹ ಈ ಅರ್ಥದಲ್ಲಿ ಅವಿದ್ಯೆಯೆ. ಇದು ಎಲ್ಲ ಅನುಭಾವಿಗಳ ಅಭಿಪ್ರಾಯ. ಆದುದರಿಂದ ಇದು ಭ್ರಮೆ ಎನ್ನಲು ಅವಕಾಶವಿಲ್ಲ.

ಅನುಭಾವಿಯು ಅನುಭಾವದಲ್ಲಿ ಲಿಂಗವನ್ನು ಅನುಭವಿಸುವುದರಿಂದ ಮತ್ತು ಅದು ತನ್ನಲ್ಲಿಯೆ ಇದೆ (ಅಥವಾ ತಾನು ಲಿಂಗವೇ ಆಗಿದ್ದೇನೆ) ಎಂದು ತಿಳಿಯುವುದರಿಂದ ಅವನಿಗೆ ಅದು ಸಂದೇಹಾತೀತ ಸತ್ಯ. ಅನುಭಾವದಲ್ಲಿ ಯಾವ ವಿಷಯವನ್ನೂ – ದೇವರು ಇದ್ದಾನೆ ಅಥವಾ ಅವನು ಜಗತ್ತನ್ನು ಸೃಷ್ಟಿಸುತ್ತಾನೆ ಮುಂತಾದ ವಿಷಯವನ್ನೂ – ಅರಿಯಲು ಸಾಧ್ಯವಿಲ್ಲ. ಅದೇನಿದ್ದರೂ ಜಾಗ್ರತಾವಸ್ಥೆಯಲ್ಲಿ ಮಾತ್ರ. ಲಿಂಗದಲ್ಲಿ ಜಗತ್ತು ಅಡಗಿದೆ ಎನ್ನುವುದು ಕೇವಲ ತರ್ಕದ ಮಾತೇ ಹೊರತು ಅನುಭಾವದಲ್ಲಿ ಅರಿಯುವ ವಿಷಯವಲ್ಲ. ಆದರೆ ಅನುಭಾವಿಯು ಅನೇಕ ಸಾರಿ ಲಿಂಗದೊಂದಿಗೆ ಸಾಮರಸ್ಯವನ್ನು ಅನುಭವಿಸಿರುವುದರಿಂದ, ಜಾಗ್ರತಾವಸ್ಥೆಗೆ ಬಂದನಂತರವೂ ಅವನು ಜಗತ್ತಿನಲ್ಲಿ ಲಿಂಗವನ್ನೇ



ಕಾಣತೊಡಗುತ್ತಾನೆ. ಆದುದರಿಂದ ಲಿಂಗ ಮತ್ತು ಅಂಗ ಒಂದೇ ಎಂಬುದು ಅಸತ್ಯವಲ್ಲದಿದ್ದರೆ, ಲಿಂಗ ಮತ್ತು ಜಗತ್ತೂ, ಅಂಗ ಮತ್ತು ಜಗತ್ತೂ ಒಂದೇ ಎಂಬುದೂ ಅಸತ್ಯವಲ್ಲ.

ಶಂಕರರು ಸತ್ತೆಯನ್ನು ಪಾರಮಾರ್ಥಿಕ, ವ್ಯಾವಹಾರಿಕ ಮತ್ತು ಪ್ರಾತಿಭಾಸಿಕ ಎಂದು ಮೂರು ಸ್ತರಗಳಾಗಿ ವಿಂಗಡಿಸುತ್ತಾರೆ. ಪ್ರಾತಿಭಾಸಿಕ ಸತ್ತೆಯೆಂದರೆ ಭ್ರಮಾತ್ಮಕ ಅಥವಾ ಕನಸಿನ ವಸ್ತುಗಳ ಇರುವಿಕೆ. ಸ್ವಪ್ನಾವಸ್ಥೆಯಿಂದ ಜಾಗ್ರತಾವಸ್ಥೆಗೆ ಬಂದಾಗ ಕನಸಿನ ವಸ್ತುಗಳು ಸತ್ಯವಲ್ಲ ಎಂಬ ಸತ್ಯ ಗೊತ್ತಾಗುತ್ತದೆ. ಅದೇ ರೀತಿ, ಹತ್ತಿರದಿಂದ ನೋಡಿದಾಗ ಹಾವು ಕಾಣದೆ, ಹಗ್ಗ ಎಂಬ ಸತ್ಯ ಕಾಣುತ್ತದೆ; ಬ್ರಹ್ಮಜ್ಞಾನ ಉಂಟಾದವನಿಗೆ ವ್ಯಾವಾಹಾರಿಕವಾಗಿ ಸತ್ಯ ಎಂದು ಕಾಣುತ್ತಿದ್ದ ಜಗತ್ತು ಇಲ್ಲವಾಗುತ್ತದೆ. ಬ್ರಹ್ಮ ಮಾತ್ರ ಪಾರಮಾರ್ಥಿಕ ಸತ್ತೆ. ಯಾವಾಗಲೂ ಇರುವಂಥಾದ್ದು. ಬ್ರಹ್ಮಜ್ಞಾನ ಅಬಾಧಿತ. ಜಗತ್ತು ನಶ್ವರ ಮಾತ್ರವಲ್ಲ, ಅದು ಮಿಥ್ಯೆ. ಅಲ್ಲಮನ ಪ್ರಕಾರ ಸತ್ತೆಗಳಲ್ಲಿ ತಾರತಮ್ಯವಿಲ್ಲ. ನಾಗಾರ್ಜುನ ಹೇಳಿದಂತೆ ಸಂಸಾರವೂ ಒಂದೆ, ನಿರ್ವಾಣವೂ ಒಂದೇ [ಬಸವಣ್ಣ ಸಹಾ "ಸ್ವಯಲಿಂಗದನುಭಾವ ತನಗೆ ದೊರೆಕೊಂಡ ಬಳಿಕ ದೇವಲೋಕವೆಂಬುದೇನೋ? ಮರ್ತ್ಯಲೋಕವೆಂಬುದೇನೋ? ಆವುದರಲ್ಲಿಯೂ ಭೇದವೇನಯ್ಯಾ" (೧/೯೪೭) ಎನ್ನುತ್ತಾರೆ]. ಶಂಕರ ಬ್ರಹ್ಮ–ಜಗತ್ತುಗಳ ಜೋಡಿಯಲ್ಲಿ ಬ್ರಹ್ಮ ಮಾತ್ರ ಸತ್ಯ, ಜಗತ್ತು ಮಿಥ್ಯೆ ಎಂದರೆ, ಅಲ್ಲಮ ಈ ಜೋಡಿಗಳಲ್ಲಿ ಎರಡೂ ಸತ್ಯ ಅಥವಾ ಎರಡೂ ಮಿಥ್ಯೆ ಎನ್ನುತ್ತಾನೆ. ಇದನ್ನು ಒಂದು ಉಪಮೆಯೊಂದಿಗೆ ವಿವರಿಸಬಹುದು. ಜಾಗ್ರತಾವಸ್ಥೆಯಲ್ಲಿ ನಮಗೆ ಎಚ್ಚರ ಮತ್ತು ನಿದ್ದೆಗಳ ವ್ಯತ್ಯಾಸ ಗೊತ್ತಾಗುತ್ತದೆ; ಆದರೆ ನಿದ್ದೆಯಲ್ಲಿ ಈ ವ್ಯತ್ಯಾಸ ಗೊತ್ತಾಗುವುದಿಲ್ಲ; ಆ ವ್ಯತ್ಯಾಸ ಗೊತ್ತಾದರೆ ನಮಗೆ ನಿದ್ದೆ ಬಂದಿಲ್ಲ ಎಂದರ್ಥ. ಅದೇ ರೀತಿ, ಸಂಸಾರದಲ್ಲಿರುವವನಿಗೆ ಸಂಸಾರ ಮತ್ತು ನಿರ್ವಾಣಗಳ ವ್ಯತ್ಯಾಸ ಗೊತ್ತು. ಆದರೆ ಅನುಭಾವಿಗೆ (ಮುಕ್ತನಿಗೆ) ಆ ವ್ಯತ್ಯಾಸವಿಲ್ಲವಾಗುತ್ತದೆ. ಏಕೆಂದರೆ ಎರಡಿಲ್ಲದ (ಅ–ದ್ವೈತ) ಎಂಬ ಸ್ಥಿತಿಯನ್ನು ಅವನು ತಲುಪಿದ್ದಾನೆ. 'ನಾನು, ನೀನು (ಲಿಂಗ), ಜಗತ್ತುಗಳಿಗೆ ಭಿನ್ನತೆ ಇಲ್ಲ' ಎಂಬ ಅನುಭಾವಿಯಾದ ಅಲ್ಲಮನ ಹೇಳಿಕೆಗೆ ಲಿಂಗನಿಂದ ಭಿನ್ನವಾದ ನಾನು/ಜಗತ್ತು ಮಿಥ್ಯೆಯಾಗಿರುವಂತೆ, ನಾನು/ಜಗತ್ತಿನಿಂದ ಭಿನ್ನವಾದ ಲಿಂಗವೂ ಮಿಥ್ಯೆ ಎಂಬ ಅರ್ಥವಿರುವುದನ್ನು ಗಮನಿಸಬೇಕು. ಎಲ್ಲವೂ ಇದೆ, ನಾವು ನೋಡುವ ನೋಟದಲ್ಲಿ ದೋಷವಿದೆ.

ಮತ್ತೆ ನಮ್ಮ ಮೂಲ ಪ್ರಶ್ನೆಗೆ ಬರೋಣ: ಅಲ್ಲಮನ ಪ್ರಕಾರ ಜಗತ್ತು ಮಾಯೆಯಲ್ಲದಿದ್ದರೆ ಅವನು ಪದೇ ಪದೇ ಬಳಸುವ ಮಾಯೆ ಎಂಬ ಪದಕ್ಕೆ ಯಾವ ಅರ್ಥವಿದೆ? ಚಾಮರಸನು ಅಲ್ಲಮನು ಮಾಯೆಯನ್ನು ಗೆದ್ದವನು ಎಂದು ಯಾವ ಅರ್ಥದಲ್ಲಿ ಹೇಳುತ್ತಿದ್ದಾನೆ?

ಅಲ್ಲಮನು ಮಾಯೆ, ಜಗತ್ತು, ಬ್ರಹ್ಮ, ಲಿಂಗ ಮುಂತಾದ ಹಳೆಯ ಪದಗಳನ್ನೇ ಬಳಸುತ್ತಿದ್ದಾನೆ, ಆದರೆ ತನ್ನದೇ ಆದ ಅಥವಾ ಹೊಸ ಅರ್ಥದಲ್ಲಿ. ಚಾಮರಸನನ್ನು ಬಿಟ್ಟು, ಕೇವಲ ಅಲ್ಲಮನ ವಚನಗಳನ್ನು ಪರಿಗಣಿಸುವುದಾದರೆ ಪ್ರಾಯಶಃ ಮಾಯೆ ಎಂಬ ಪದಕ್ಕೆ ನಾವು ನಾಲ್ಕು ಅರ್ಥಗಳಿರುವುದನ್ನು ಕಾಣಬಹುದು.

೧. ಮಾಯೆ ಎಂದರೆ ಮರೆವು. ಇದು ಸಾಧಾರಣ ಮರೆವಲ್ಲ, ಜನ್ಮಜನ್ಮಾಂತರದ ಮರೆವು. ಮನುಷ್ಯ ತಾನು ಮೂಲತಃ ಲಿಂಗ ಎಂಬುದನ್ನೇ ಮರೆತಿದ್ದಾನೆ; ತಾನು ಲಿಂಗದಿಂದ

ಪ್ರತ್ಯೇಕವಾದ ವ್ಯಕ್ತಿ ಎಂದು ತಪ್ಪು ತಿಳಿದಿದ್ದಾನೆ. ಹುಟ್ಟಿದವರಿಗೆ ಈ ರೀತಿಯ ಮರೆವು ಸಹಜ (೨/೩೧೧). ಇನ್ನೂ ಸ್ಪಷ್ಟವಾಗಿ ಹೇಳಬೇಕೆಂದರೆ: ನನ್ನ ಆತ್ಮವೇ ಲಿಂಗ, ನನ್ನ ದೇಹವೇ ದೇವಾಲಯ (೨/೧೯೪–೧೯೭) ಎಂಬುದನ್ನು ಮರೆತು, ನಾನು ಭೌತ ದೇಹ, ಇಂದ್ರಿಯ ಮತ್ತು ಕರಣಗಳ ಸಂಪುಟ ಎಂದು ತಪ್ಪು ತಿಳಿದಿದ್ದಾನೆ (೨/೧೪, ೧೬, ೩೮, ಇ). ಈ ತಪ್ಪು ತಿಳಿವಳಿಕೆ ಘೋರ ಪರಿಣಾಮಗಳಿಗೆ ಎಡೆ ಮಾಡಿಕೊಡುತ್ತದೆ. ಭೌತದೇಹದಿಂದಾಗಿ ಮನುಷ್ಯ ದೇಹಾಭಿಮಾನಕ್ಕೆ ಒಳಗಾಗುತ್ತಾನೆ. ಇಂದ್ರಿಯಗಳಿಂದಾಗಿ ವಿಷಯಗಳಿಗೆ ಹಾತೊರೆಯುತ್ತಾನೆ. ಎಷ್ಟು ವಿಷಯಗಳನ್ನು ಸಂಗ್ರಹಿಸಿದರೂ, ಎಷ್ಟು ವಿಷಯಗಳನ್ನು ಅನುಭವಿಸಿದರೂ ಅವನಿಗೆ ತೃಪ್ತಿಯಿಲ್ಲ (೨/೧೮). ಮನಸ್ಸು, ಬುದ್ಧಿ ಮುಂತಾದ ಕರಣಗಳಿಂದಾಗಿ ಸಂಕಲ್ಪ–ವಿಕಲ್ಪಗಳಿಗೂ, ಕೋಪತಾಪಗಳಿಗೂ ಒಳಗಾಗುತ್ತಾನೆ. ಇವುಗಳನ್ನು ತೃಪ್ತಿಪಡಿಸಲು ಅವನು ನಾನಾ ರೀತಿಯ ಕರ್ಮಗಳನ್ನು ಮಾಡಿ ಅವುಗಳ ಫಲಗಳನ್ನು ಅನುಭವಿಸಲು ಮತ್ತೆ ಮುಂದಿನ ಜನ್ಮ ಎತ್ತುತ್ತಾನೆ. ಮುಂದಿನ ಜನ್ಮದಲ್ಲಿಯೂ ಇದೇ ಕತೆ ಮರುಕಳಿಸುವುದರಿಂದ ಭವಚಕ್ರಕ್ಕೆ ಸಿಕ್ಕಿಕೊಳ್ಳುತ್ತಾನೆ (೨/೧೨). ಈ ಅಭಿಮಾನ ಕೇವಲ ಕೆಲವರಿಗೆ ಸೀಮಿತವಾಗಿರದೆ ಬ್ರಹ್ಮ, ವಿಷ್ಣು ಮುಂತಾದವರಿಗೂ ಅನ್ವಯಿಸುತ್ತದೆ (೨/೨೨, ೨೩). ಹೀಗೆ ಮಾಯೆ ಎಂದರೆ ನಮಗೆ ಸಂಸಾರ ಬಂಧನವನ್ನು ಉಂಟು ಮಾಡುವ ಒಂದು ರೀತಿಯ ಮರೆವು ಅಥವಾ ಅವಿದ್ಯೆ ಎಂಬ ಅರ್ಥದಲ್ಲಾದರೆ ಅಲ್ಲಮನಿಗೂ ಶಂಕರರಿಗೂ ಸಾಮ್ಯವಿದೆ.

ಈ ಮರೆವಿನ ಮೇಲೆ ಕಟ್ಟಿದ ಮಾನವರ ಬಾಳ್ವೆ ಶೋಚನೀಯವಾಗಿದೆ. ಅವರು ಪ್ರಾಣಿಗಳಂತೆ ಹುಟ್ಟುತ್ತಾರೆ, ಸಾಯುತಾರೆಯೇ ಹೊರತು, ತನ್ನ ಆತ್ಮ ಎಲ್ಲಿಂದ ಬಂತು, ಅಲ್ಲಿಗೆ ಹೋಗುತ್ತದೆ, ಸರಿಯಾದ ಗುರಿ ಯಾವುದು ಎಂಬ ಪ್ರಶ್ನೆಗಳನ್ನು ಯಾರೂ ಕೇಳುವುದಿಲ್ಲ (೨/೪೪, ೪೫).

೨. ಅಲ್ಲಮನ ಪ್ರಕಾರ ಮಾಯೆ ಮತ್ತು ಮನಸ್ಸು ಪರಸ್ಪರ ಸಂಬಂಧಿಗಳು. ಮನ ಎಂಬ ಪದಕ್ಕೆ ಕೆಲವರು 'ಅಳೆಯುವ ಸ್ವಭಾವವುಳ್ಳದ್ದು' ಎಂಬ ಅರ್ಥ ಕೊಡುತ್ತಾರೆ. ಅಂದರೆ, ಮನಸ್ಸು (ಬುದ್ಧಿ) ಯಾವುದೇ ವಸ್ತುವನ್ನು ತಿಳಿದುಕೊಂಡಾಗಲೂ 'ಅದು ಒಂದಿರಬೇಕು, ಅನೇಕವಿರಬೇಕು, ಸ್ವಲ್ಪವಿರಬೇಕು ಬಹಳವಿರಬೇಕು', ಎಂದು ಚಿಂತಿಸುತ್ತದೆ. ಅಂದರೆ, ಭಾಗ ಮಾಡಿ ನೋಡುವುದು, ಇಡಿಯಾಗಿ ತಿಳಿದುಕೊಳ್ಳದಿರುವುದು ಅದರ ಸ್ವಭಾವ. ಏಕೆಂದರೆ, ಅದು ಇಂದ್ರಿಯಗಳನ್ನು ಅವಲಂಬಿಸುತ್ತದೆ. ಯಾವುದೇ ಇಂದ್ರಿಯವೂ ಏನನ್ನೂ ಇಡಿಯಾಗಿ, ಪೂರ್ತಿಯಾಗಿ ನೋಡಲು ಸ್ವಭಾವತಃ ಅಶಕ್ತವಾಗಿದೆ. ಇಡಿಯಾಗಿ ಪೂರ್ತಿಯಾಗಿ ನೋಡುವ ಶಕ್ತಿ ತನ್ನಲ್ಲೆ ವಿಶ್ವವನ್ನು ಅಡಗಿಸಿಕೊಂಡಿರುವ ಪರಮಾತ್ಮನಿಗೆ ಮಾತ್ರ ಇದೆ. ಅಂದರೆ, ಸಮಗ್ರ ಜ್ಞಾನ ಮನಸ್ಸಿಗೆ ಅಸಾಧ್ಯ. ಅಪೂರ್ಣ ಜ್ಞಾನಕ್ಕೆ ಅದು ತೃಪ್ತಿಪಟ್ಟುಕೊಳ್ಳಬೇಕು. ಅಪೂರ್ಣ ಜ್ಞಾನ ಎಂದರೆ ಅವಿದ್ಯೆ. ಮಾಯಾಧೀನ ಮನಸ್ಸುಗಳಿಗೆ ಪೂರ್ಣ ಜ್ಞಾನ ಅಲಭ್ಯ.

ಅಲ್ಲಮನ ಪ್ರಕಾರ ಮಾಯಾಧೀನ ಮನಸ್ಸಿಗೆ ಮತ್ತೊಂದು ಸ್ವಭಾವವಿದೆ. ಅದು ಯಾವಾಗಲೂ ತನ್ನನ್ನು ಜ್ಞಾತೃ (subject) ಎಂದೂ ಬಾಹ್ಯ ವಸ್ತುಗಳನ್ನು ಜ್ಞೇಯ



(object) ಎಂದೂ ಪರಿಗಣಿಸುತ್ತದೆ. ಅಷ್ಟೇ ಅಲ್ಲ, ಅದು ತಾನು ತಿಳಿದುಕೊಳ್ಳುವ ವಸ್ತು ತಾನಲ್ಲ ಎಂಬುದು ಅದರ ಪೂರ್ವಾಗ್ರಹ. ಈ ದ್ವೈತವಿಲ್ಲದ ಯಾವ ವ್ಯಾವಹಾರಿಕ ಜ್ಞಾನವೂ ಇಲ್ಲ. ಈ ದ್ವೈತ ಸ್ವಭಾವ ಇರುವವರೆಗೆ ಅದು ಜಗತ್ತನ್ನೊಳಗೊಂಡ ಪರಮಾತ್ಮ(ಲಿಂಗ)ನನ್ನು ಅರಿಯಲಾರದು. ಒಂದು ವೇಳೆ, ಸಾಧಕ ಅನುಭಾವಿಯಾದರೆ ಆಗ ಅವನು ತಾನು, ಜಗತ್ತು ಮತ್ತು ಲಿಂಗ ಒಂದೇ ಎಂಬ ಅದ್ವಯ ಅನುಭೂತಿಯನ್ನು ಪಡೆಯುತ್ತಾನೆ; ಆಗ ಮನಸ್ಸೂ ಲಿಂಗವಾಗುತ್ತದೆ. ಆಗ ಅಲ್ಲಮನಂತಹ ಅನುಭಾವಿಗಳು ಮನವೇ ಲಿಂಗವಾದ ಬಳಿಕ ನೆನೆವುದಾರನ್ನು? ಎಂದು ಕೇಳುತ್ತಾರೆ. ಅದು ಸಹಜ. ಅನುಭಾವದಲ್ಲಿ ನಾನು (ಅಹಂ) ಅಥವಾ ಜ್ಞಾತೃ ತಾತ್ಕಾಲಿಕವಾಗಿ ನಿಷ್ಕ್ರಿಯವಾಗಿರುವುದರಿಂದ ಯಾವ ಬಾಹ್ಯ ಜ್ಞೇಯದ ಅನುಭವವೂ ಆಗುವುದಿಲ್ಲ. ಅನುಭಾವದಿಂದಾಗಿ ಲಿಂಗದಿಂದ ಭಿನ್ನವಾದ ಜ್ಞಾತೃ (ನಾನು) ಇಲ್ಲವಾಗುತ್ತದೆ; ಜ್ಞಾತೃವಿನಿಂದ ಭಿನ್ನವಾದ ಲಿಂಗವೂ ಇಲ್ಲವಾಗುತ್ತದೆ. ಇದನ್ನೆ ಅಲ್ಲಮ 'ನಾನೂ ಇಲ್ಲ, ನೀನೂ ಇಲ್ಲ' ಎನ್ನುತ್ತಾನೆ. ಅವನ ಬೆಡಗಿನ ಮಾತಿನಲ್ಲಿ ಹೇಳುವುದಾದರೆ: ನಾನೂ ಸಾಯುತ್ತೇನೆ, ಶಿವನೂ ಸಾಯುತ್ತಾನೆ, ಗಂಗೆ, ಗೌರಿಯರು ಮುಂಡೆಯರಾಗುತ್ತಾರೆ.

ಮಾಯೆ ಎಂದರೆ ತಪ್ಪು ತಿಳುವಳಿಕೆ ಎಂದಾದರೆ ಅದು ಮಾನವನಲ್ಲಿ ಅನೇಕ ರೀತಿಯಲ್ಲಿ ಪ್ರಕಟವಾಗುತ್ತದೆ. ಸಂಪ್ರದಾಯವಾದಿಗಳು ಇಷ್ಟಲಿಂಗಕ್ಕೂ ಲಿಂಗಧಾರಣೆಗೂ ಬಹಳ ಮಹತ್ವ ಕೊಡುವುದರಿಂದ ಅದನ್ನು ಕಳೆದುಕೊಂಡರೆ, ಬೀಳಿಸಿದರೆ, ಒಡೆದರೆ ಅದು ಅಧರ್ಮವೆಂದು ಬಗೆದು ವನವಾಸ, ಆತ್ಮಹತ್ಯೆ ಮುಂತಾದ ಘೋರ ಶಿಕ್ಷೆಗೆ ಸಿದ್ಧರಾಗುತ್ತಾರೆ. ಲಿಂಗ ಕೇವಲ ಒಂದು ಕಲ್ಲಿನ ತುಂಡು ಎಂಬುದು ಅಲ್ಲಮನಿಗೆ ಗೊತ್ತು. ಅವನು ಅದಕ್ಕೆ ಕೊಡುವ ಗೌರವ ಅತ್ಯಲ್ಪ. ಒಂದು ಮೆಳೆಗೆ ಅದನ್ನು ನೇತು ಹಾಕಿದರೆ ಅದು ಭಕ್ತನಾಗುವುದಿಲ್ಲ. ಅಲ್ಲಮನ ಪ್ರಕಾರ, ಕಲ್ಲನ್ನು ನೀಡಿದ ಬೆಟ್ಟ, ಕಲ್ಲನ್ನು ಲಿಂಗವನ್ನಾಗಿ ಕೆತ್ತಿದ ಶಿಲ್ಪಿ, ಆ ಕಲ್ಲನ್ನು ಮಂತ್ರೋಕ್ತ ದೀಕ್ಷೆಯ ಮೂಲಕ ಪವಿತ್ರ ಲಿಂಗವನ್ನಾಗಿ ಮಾಡಿದ ಗುರು – ಈ ಮೂವರಿಗೆ ಹುಟ್ಟಿದ ಲಿಂಗ ಸೂಳೆಯಮಗ (೨/೧೯೪). ಆದರೆ ಲಿಂಗ, ಲಿಂಗಪೂಜೆ, ಲಿಂಗಧಾರಣೆ, ಲಿಂಗಧ್ಯಾನ ಇವೆಲ್ಲ ನಿರುಪಯುಕ್ತ ಎಂಬುದು ಅಲ್ಲಮನ ಮತವಲ್ಲ. ಲಿಂಗವನ್ನು ದೇಹದ ಮೇಲೆ ಧರಿಸಬೇಕು, ಅದಕ್ಕಿಂತ ಹೆಚ್ಚಾಗಿ ಅದನ್ನು ಮನಸ್ಸಿನಲ್ಲಿ ಧರಿಸಬೇಕು. ಹೊರಗಿನ ನೀರು, ಹೊರಗಿನ ಹೂವು, ಹೊರಗಿನ ವಸ್ತುಗಳ ಅರ್ಪಣೆ ಬೇಡ, ಬದಲಿಗೆ, ನಮ್ಮ ಅವಗುಣಗಳನ್ನು ಲಿಂಗಕ್ಕೆ ಅರ್ಪಿಸಬೇಕು; ಲಿಂಗವನ್ನು ಧ್ಯೇಯವಸ್ತುವನ್ನಾಗಿ ಬಳಸಬೇಕೇ ಹೊರತು, ಪೂಜೆಯನಂತರ ವಸ್ತ್ರದಲ್ಲಿ ಕಟ್ಟಿಡುವುದಲ್ಲ; ಲಿಂಗವನ್ನು ಧ್ಯಾನಿಸುವ ಮೂಲಕ ಇಷ್ಟಲಿಂಗ, ಶೂನ್ಯಲಿಂಗ ಮತ್ತು ಪೂಜಕ ಒಂದೇ ಎಂಬ ಆನುಭಾವಿಕ ಅರಿವನ್ನು ಪಡೆಯಬೇಕು.

ತಾನು ಲಿಂಗವಲ್ಲ ಎಂಬ ಮರೆವಿಗೊಳಗಾದ ಮಾನವ ಲಿಂಗವನ್ನು ಹೊರಗೆ ಎಲ್ಲೆಲ್ಲೋ ಹುಡುಕುತ್ತಾನೆ. ಸ್ಥಾವರಲಿಂಗದಲ್ಲಿ ಹುಡುಕಿ ನಿರಾಶನಾದಂತೆ, ಇಷ್ಟಲಿಂಗದಲ್ಲಿಯೂ ಹುಡುಕಿ ನಿರಾಶನಾಗುತ್ತಾನೆ. ಇಷ್ಟಲಿಂಗವೂ ಸಹ ದೇವರಲ್ಲ (೨/೨೦೯, ೨೧೦, ೨೧೨, ೨೧೩, ೨೧೭, ೨೧೯, ಇ.). ಅದು ಕೇವಲ ಅರಿವಿನ (ಲಿಂಗದ) ಕುರುಹು. ವಾಸ್ತವವಾಗಿ

ನಮ್ಮ ದೇಹದಲ್ಲೇ ಶಿವ ಇದ್ದಾನೆಂದರೂ ಅವನು ಕಲುಷಿತ ದೇಹದಲ್ಲಿಲ್ಲ (೨/೧೫೯, ೧೪೨). ನಮ್ಮ ಕಲುಷಿತ ದೇಹ ಶುದ್ಧವಾಗಬೇಕು, ಶಿವನ ವಾಸಸ್ಥಾನವಾಗಬೇಕು ಎಂದರೆ ದೇಹದಲ್ಲಿರುವ ಪಂಚಭೂತಗಳ ಪೂರ್ವಾಶ್ರಯವನ್ನು ಕಳೆಯಬೇಕು (೨/೧೩೬). ಆಗ ನಾವು ಪದ್ಮಗಳನ್ನು ಜಾಗೃತಗೊಳಿಸುವ ಮೂಲಕ ಅವುಗಳಲ್ಲಿರುವ ಲಿಂಗವನ್ನು ಕಾಣಬಹುದು (೨/೧೮೮, ೧೮೯, ೨೮೩). ಈ ವಿಚಾರದಲ್ಲಿ ವ್ರತಾಚರಣೆ ನಿಷ್ಪ್ರಯೋಜಕ (೨/೧೨೦, ೧೮೨, ೪೧೬, ೬೩೨, ೧೫೩೪). ದೇಹದಂಡನೆಯಿಂದಲೂ ಲಿಂಗವನ್ನು ಕಾಣಲಾರೆವು (೨/೧೫೨). ಮರೆವನ್ನು ಹೋಗಲಾಡಿಸಿಕೊಳ್ಳುವ ಸೂಕ್ತ ಉಪಾಯವೆಂದರೆ 'ನಾನು' ಎಂಬ ಭಾವವನ್ನು ನಾಶ ಮಾಡುವ ಅನುಭಾವವನ್ನು ಸಾಧಿಸುವುದು. ಇದನ್ನು ಸಾಧಿಸಿದವನು ಕ್ರಮವಾಗಿ ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ ಮತ್ತು ಆಜ್ಞಾ ಚಕ್ರಗಳಲ್ಲಿ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ ಮತ್ತು ಮಹಾಲಿಂಗಗಳನ್ನು ಅನುಭವಿಸುತ್ತಾನೆ. ಇದರ ಪರಿಣಾಮವೆಂದರೆ ಅವನು ಸಹಸ್ರಾರದಲ್ಲಿರುವ ಅಮೃತವನ್ನು ಸವಿಯುತ್ತಾನೆ (೨/೨೫೫-೨೬೨).

ಇದರಿಂದ ಅವನಿಗೆ ತನುಭಾವ, ಅಹಂಭಾವ ನಷ್ಟವಾಗುತ್ತದೆ. ಅಹಂಭಾವ ಇಲ್ಲವಾಗಿ ಕರ್ತೃತ್ವ ಭಾವ ಇಲ್ಲವಾಗುತ್ತದೆ (೨/೨೮೦). ಕರ್ತೃತ್ವ ಭಾವ ಇಲ್ಲವಾಗುವುದರಿಂದ ಅವನು ಮಾಡುವ ಕ್ರಿಯೆಗಳಲ್ಲಿ ಸ್ವಾರ್ಥ ಆಸೆಗಳು ಇಲ್ಲವಾಗಿ, ಅವನ ಕರ್ಮಗಳಿಗೆ ಫಲಗಳು ಇಲ್ಲವಾಗುತ್ತವೆ. ಕರ್ಮಫಲಗಳು ಇಲ್ಲವಾದರೆ ಪುನರ್ಜನ್ಮವಿಲ್ಲ. ಚಿತ್ರಗುಪ್ತರಿಗೆ ಕೆಲಸವಿಲ್ಲ. ಮತ್ತೊಮ್ಮೆ ಸೃಷ್ಟಿಗೂ ಸಿಲುಕುವುದಿಲ್ಲ (ಬ್ರಹ್ಮನಿಗೂ ಕೆಲಸವಿಲ್ಲದಂತಾಗುತ್ತದೆ).

ಮಾಯೆಗೆ ಒಳಗಾದ ಗೋರಕ್ಷ ದೇಹವೇ ತಾನೆಂದು ತಪ್ಪು ತಿಳಿದು, ಅದನ್ನು ವಜ್ರದಂತೆ ಕಠಿಣವನ್ನಾಗಿ ಮಾಡಿಕೊಳ್ಳುತ್ತಾನೆ. ಅವನು ತನ್ನಲ್ಲಿ ಒಂದು ಆತ್ಮವಿದೆ, ಅದೇ ಲಿಂಗ ಎಂಬ ಅರಿವು ಇಲ್ಲದ ಅಜ್ಞಾನಿ.

ಶಿವನನ್ನು ಕೂಡುವ ಎರಡು ಪ್ರಕಾರಗಳಿವೆ. ಸತ್ತಮೇಲೆ ಕೈಲಾಸಕ್ಕೆ ಹೋಗಿ ಶಿವನ ಸನ್ನಿಧಿಯಲ್ಲಿರುವುದು ಒಂದು ಪ್ರಕಾರ. ಪ್ರತಿಯೊಬ್ಬ ಮಾನವನಲ್ಲಿರುವ ಆತ್ಮವೂ ಲಿಂಗವೇ. ಅದನ್ನು ಜೀವಂತ ಇದ್ದಾಗಲೆ ಸಾಕ್ಷಾತ್ಕರಿಸಿಕೊಳ್ಳುವುದೇ ಜೀವನದ ಪರಮ ಧ್ಯೇಯ. ಅದೊಂದು ರೀತಿಯ ಜ್ಞಾನ. ಅದನ್ನು ಅನುಭಾವದ ಮೂಲಕವೇ ಗಳಿಸಿಕೊಳ್ಳಬೇಕು. ಅದನ್ನು ಪಡೆದವನು ಮುಕ್ತ. ಅವನಿಗೆ ಯಾವ ಚಿಂತೆಯೂ ಇಲ್ಲ. ಯಾರು ಸತ್ತ ಮೇಲೆ ಶಿವ ಇರುವ ಕೈಲಾಸಕ್ಕೆ ಹೋಗಿ, ಶಿವಸನ್ನಿಧಿ ಯಲ್ಲಿರಬೇಕೆಂದು ಬಯಸುತ್ತಾರೊ ಅವರು ಮಾಯಾಧೀನರು. ಶಿವನಿಂದ ಭಿನ್ನವೆಂದು ತಿಳಿದಿರುವ ಅವರು ಮಾಯಾಧೀನರು. ಅವರು ಲಿಂಗೈಕ್ಯರಲ್ಲ, ಲಿಂಗೈಕ್ಯರಾಗಬೇಕೆಂಬ ಬಯಕೆಯೂ ಅವರಿಗಿಲ್ಲ. ಅವರು ಮುಕ್ತರಲ್ಲ. ಸನಕ, ಸಾನಂದ, ಬ್ರಹ್ಮ, ವಿಷ್ಣು, ಮುಂತಾದವರೆಲ್ಲ ಮಾಯಾಧೀನರೇ. ಮಾಯಾಧೀನರಾದ ಅವರು ಸಂಸಾರದಲ್ಲಿದ್ದಾರೆಂದರ್ಥ. ಮಾನವರಿಗೆ ಮರ್ತ್ಯಲೋಕದ ಸಂಸಾರ, ದೇವರಿಗೆ ದೇವಲೋಕದ ಸಂಸಾರ (೨/೫೦೩, ೫೦೫-೫೦೮, ೫೧೦). ಶಿವನನ್ನು ಅಳಿಯದೆ ಕೂಡುವ ಮತ್ತು ಅಳಿದು ಕೂಡುವ ಯೋಗಗಳಲ್ಲಿ ಅಲ್ಲಮ ಮೊದಲನೆಯದು ಶ್ರೇಷ್ಠ ಎನ್ನುತ್ತಾನೆ (೨/೨೫೭).



೩. ಮಾಯೆ ಎಂಬ ಪದವನ್ನು ಅಲ್ಲಮ ಆಸೆ ಅಥವಾ ಆಕರ್ಷಣೆ ಎಂಬ ಅರ್ಥದಲ್ಲಿಯೂ ಬಳಸಿದ್ದಾನೆ. ಮಾಯೆಯಿಂದಾಗಿ ಮನುಷ್ಯನಲ್ಲಿ ಸ್ವಾರ್ಥ ಆಸೆಗಳು ಹುಟ್ಟುತ್ತವೆ. ಮನುಷ್ಯನಿಗೆ ನಾನು ಎಂಬ ಭಾವ ಬಹಳ ಮುಖ್ಯವಾದುದು. ಈ ಭಾವ ಆನೆಯಷ್ಟು ದೊಡ್ಡದು; ಅದನ್ನು ಮನಸ್ಸು ನಿಯಂತ್ರಿಸಬಲ್ಲುದು. ಆದರೆ ಆ ಮನಸ್ಸೇ ಮಂಗನಂತೆ ಚಂಚಲವಾಗಿದೆ. ಭೌತ ಪ್ರಪಂಚ ಸೂಳೆಯೆಂತೆ ಆಕರ್ಷಿಸುತ್ತಿರುವಾಗ ಆನೆಯಷ್ಟು ದೊಡ್ಡದಾದ ಸ್ವಾರ್ಥ ಭಾವವನ್ನು ಮಂಗನಂತಿರುವ ಮನಸ್ಸು ನಿಯಂತ್ರಿಸಲಾರದು (೨/೪೯). ಆಸೆ ಅಥವಾ ಆಕರ್ಷಣೆಗೊಳಗಾಗದವರು ತುಂಬಾ ವಿರಳ (೨/೧೫೦, ೧೫೧).

ತಮ್ಮ ಆಸೆಗಳನ್ನು ನಿಯಂತ್ರಿಸಲಾಗದವರು ಮಯೆಯನ್ನು ದೂಷಿಸುತ್ತಾರೆ. ವಾಸ್ತವವಾಗಿ ಹೆಣ್ಣು, ಹೊನ್ನು, ಇ. ಮಾಯೆಯಲ್ಲ. ಅವುಗಳ ಬಗೆಗಿನ ಆಸೆಯೇ ಮಾಯೆ (೨/೭೨). ಮಾಯೆ ನಮ್ಮೊಳಗೇ ಇದೆ, ಹೊರಗಿಲ್ಲ. ಈ ಮಾಯೆ ಕೇವಲ ಹೊನ್ನು, ಹೆಣ್ಣುಗಳ ಬಗೆಗಿನ ಆಸೆಯಲ್ಲ, ಪ್ರಾಪಂಚಿಕ ದಾಹ ಯಾವುದಿದ್ದರೂ ಅದು ಮಾಯೆಯೇ (೨/೨೬, ೨೯, ೩೦, ೪೬, ೭೮, ೯೯, ೧೧೪, ೧೧೬, ೩). ಮಾಯಾಧೀನ ಮನುಷ್ಯ ಸಾಸಿವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖ ಅನುಭವಿಸಲು ಸಿದ್ಧನಿದ್ದಾನೆ (೨/೧೨೩). ಈ ಆಸೆಗಳಿಂದ ಮುಕ್ತನಾಗಬೇಕೆಂದರೆ ಆಸೆಗಳನ್ನು ನಿಯಂತ್ರಿಸಬೇಕು; ಈ ಆಸೆಗಳನ್ನು ನಿಯಂತ್ರಿಸಬೇಕೆಂದರೆ ಮನುಷ್ಯ ಎಂದರೆ ದೇಹಾಭಿಮಾನ, ಆಸೆಆಮಿಶ, ಕೋಪತಾಪಗಳನ್ನುಳ್ಳವನೇ ಹೊರತು ಲಿಂಗವಲ್ಲ ಎಂಬ ತಪ್ಪು ತಿಳುವಳಿಕೆಯನ್ನು ಹೋಗಲಾಡಿಸಿಕೊಳ್ಳಬೇಕು. ಗುರುಕರುಣೆಯಿಂದ ಈ ಮರೆವನ್ನು ಹೋಗಲಾಡಿಸಿ ಕೊಳ್ಳಬಹುದು. ಅವನಿಗೆ 'ನಾನು ಮಾಯೆಯ ಬಲೆಯಲ್ಲಿ ಸಿಲುಕಿದ ಮರುಳನಲ್ಲ, ನಾನು ನಿಜವಾಗಿಯೂ ಲಿಂಗ' ಎಂಬ ಅರಿವು ಮೂಡಬೇಕು (೨/೧೧).

೪. ಅಲ್ಲಮನು ಮಾಯೆ ಎಂಬ ಪದವನ್ನು ಭವ, ಜಗತ್ತು, ಸಂಸಾರ ಎಂಬರ್ಥದಲ್ಲಿ ಬಳಸುತ್ತಾನೆ. ಮಾಯಾಜನ್ಯ ಜಗತ್ತು ಅವನ ಪ್ರಕಾರ 'ಆಡಂಬರದೊಳಗಾಡಂಬರ' (೨/೨೪); ಮತ್ತೆ ಕೆಲವು ವೇಳೆ 'ಊರಮಧ್ಯದ ಕಾಡು' (೨/೨೬); ಮಾಯೆಗೆ ಒಳಗಾದ ಮನುಷ್ಯರನ್ನು ಆಕರ್ಷಿಸುವ ಸೂಳೆ (೨/೩೮, ೪೯). ಅನೇಕ ವಚನಕಾರರ ಪ್ರಕಾರ ಪ್ರಪಂಚದ ಉಪಾದಾನ ಕಾರಣವಾದ ಮಾಯೆ (ಶಕ್ತಿ) ಅಧೋಮಾಯೆ ಮತ್ತು ಊರ್ಧ್ವಮಾಯೆ ಎಂದು ದ್ವಿವಿಧ. ಯಾವುದೂ ಮಿಥ್ಯೆಯಲ್ಲ. ಎರಡಕ್ಕೂ ಸ್ವತಂತ್ರ ಅಸ್ತಿತ್ವವಿದೆ. ವಾಸ್ತವವಾಗಿ ಇರುವುದೊಂದೇ ಶಕ್ತಿ (ಮಾಯೆ). ಶಕ್ತಿಯಿಂದಾದ ಇಂದ್ರಿಯ, ಅಂತಃಕರಣ ಮತ್ತು ದೇಹಗಳನ್ನು ಪ್ರಾಪಂಚಿಕ ಉದ್ದೇಶಕ್ಕೆ ಬಳಸಿಕೊಂಡರೆ ಅದು ಅಧೋಮಾಯೆ ಎನಿಸಿಕೊಳ್ಳುತ್ತದೆ; ಆಗ ನಮಗೆ ಕಾಣುವ ಪ್ರಪಂಚ ಸಂಸಾರ. ಅವೇ ದೇಹೇಂದ್ರಿಯಾದಿಗಳನ್ನು ಆಧ್ಯಾತ್ಮಿಕ ಉದ್ದೇಶಕ್ಕೆ ಬಳಸಿಕೊಂಡರೆ ಅದು ಊರ್ಧ್ವ ಮಾಯೆ ಎನಿಸಿಕೊಳುತ್ತದೆ. ಆಗ ನಮಗೆ ಕಾಣುವ ಜಗತ್ತು ಶಿವನ ಶರೀರ. ಇಲ್ಲಿ ಶಂಕರರ ಮಿಥ್ಯೆಗೂ ಅಲ್ಲಮನ ಸಂಸಾರಕ್ಕೂ ಇರುವ ವ್ಯತ್ಯಾಸವನ್ನು ಗಮನಿಸಬೇಕು. ಮನುಷ್ಯ ತನ್ನ ಬಗೆಗಿನ ಮರೆವಿನಿಂದಾಗಿ, ವಿಷಯಗಳ ಆಸೆಯಿಂದಾಗಿ ಸ್ವಾರ್ಥ ಕರ್ಮಗಳನ್ನು ಮಾಡುವ ಮೂಲಕ ತನ್ನ ಸಂಸಾರವನ್ನು ತಾನೇ ಸೃಷ್ಟಿಸಿಕೊಳ್ಳುತ್ತಾನೆ. ವಿಶ್ವ ದೈವ ನಿರ್ಮಿತ. ಮಾನವ ನಿರ್ಮಿತ ಸಂಸಾರ ಲಿಂಗೈಕ್ಯನಿಗೆ

ಇಲ್ಲವಾಗುತ್ತದೆ, ಎನ್ನುವುದು ತಪ್ಪು. ಬದಲಿಗೆ ಅದು ಶಿವನ ಶರೀರವಾಗುತ್ತದೆ. ಶರೀರ ಎಂಬ ಉಪಮೆಯನ್ನು ಬಿಟ್ಟು ದಾರ್ಶನಿಕವಾಗಿ ಮಾತಾಡಬೇಕೆಂದರೆ: ಅನುಭಾವಿಗೆ ಪ್ರಪಂಚವೂ ಕಾಣುತ್ತದೆ, ಅದರಲ್ಲಿರುವ ಶಿವನೂ ಕಾಣುತ್ತಾನೆ. ನಾನೇ ಆ ಜಗತ್ತನೊಳಗೊಂಡ ಶಿವ ಎಂಬ ಅನುಭೂತಿಯೂ ಅವನಿಗಿದೆ. ಶಾಂಕರ ಅದ್ವೈತದಲ್ಲಿ ದೇಹ ಮಾಯೆ; ಆದರೆ ಅಲ್ಲಮ ದೇಹವನ್ನು ದೇವಾಲಯದ ಮಟ್ಟಕ್ಕೆ ಏರಿಸುತ್ತಾನೆ.

ಮಾಯೆಯನ್ನು ಗೆದ್ದವನು ಎಂಬ ಬಿರುದನ್ನು ಅಲ್ಲಮನಿಗೆ ಅಂಟಿಸಲಾಗಿದೆ. ಚಾಮರಸನ ದೃಷ್ಟಿಯಲ್ಲಿ ಮಾಯೆ ಎಂದರೇನು? ಅವನ ಪ್ರಭುಲಿಂಗಲೀಲೆಯಲ್ಲಿ ಮಾಯೆ ಎಂಬುದು ಪಾರ್ವತಿಯ (ಶಕ್ತಿಯ) ತಾಮಸಿಕ ಅಂಶ (ವಿಮಲೆ ಎಂಬುದು ಶಕ್ತಿಯ ಸಾತ್ವಿಕ ಅಂಶ). ಮಾಯೆ ಅವನ ದೈಹಿಕ ಸಂಗವನ್ನು ಬಯಸಿ, ಅವನನ್ನು ಅಪ್ಪಿಕೊಂಡಾಗ ಕೇವಲ ಗಾಳಿಯನ್ನು ಅಪ್ಪಿಕೊಂಡಂತಾಯಿತೇ ಹೊರತು, ಒಬ್ಬ ಜೀವಂತ ಪುರುಷನನ್ನು ಅಪ್ಪಿಕೊಂಡಂತಾಗಲಿಲ್ಲ. ಹಾಗಾದರೆ ಅಲ್ಲಮನಿಗೆ ಪಂಚಭೂತಗಳಿಂದಾದ ದೇಹ (ಸ್ಥೂಲಶರೀರ) ಇರಲಿಲ್ಲವೆ? ಸ್ಥೂಲಶರೀರವಿಲ್ಲದ ಅಲ್ಲಮನನ್ನು ಅಲ್ಲಮ ಎಂದು ಗುರುತಿಸುವುದಾದರೂ ಹೇಗೆ? ಈ ಪ್ರಶ್ನೆ ಗೋರಕ್ಷನ ಪ್ರಸಂಗದಲ್ಲೂ ಕಾಡುತ್ತದೆ, ಬೇರೊಂದು ರೀತಿಯಲ್ಲಿ. ಗೋರಕ್ಷನನ್ನು ಅಲ್ಲಮ ಕತ್ತಿಯಿಂದ ಹೊಡೆದಾಗ ಗೋರಕ್ಷನಿಗೆ ನೋವಾಗಲಿಲ್ಲ, ಗಾಯವಾಗಲಿಲ್ಲ. ಏಕೆಂದರೆ ಅವನದು ವಜ್ರಕಾಯ. ಆದರೆ ಅದೇ ಗೋರಕ್ಷ ಅಲ್ಲಮನಿಗೆ ಕತ್ತಿಯಿಂದ ಹೊಡೆದಾಗ, ಗಾಳಿಯಲ್ಲಿ ಕತ್ತಿಯನ್ನು ಬೀಸಿದಂತೆ ಆಯಿತೇ ಹೊರತು, ಅಲ್ಲಮನಿಗೆ ಏನೂ ಆಗಲಿಲ್ಲ. ಏಕೆಂದರೆ ಅಲ್ಲಮ ಸ್ಥೂಲಶರೀರಿಯಾಗಿರಲಿಲ್ಲ, ಕೇವಲ ವ್ಯೋಮಕಾಯನಾಗಿದ್ದ. ಸ್ಥೂಲ ಶರೀರವಿಲ್ಲದ ಅಲ್ಲಮನಿಗೆ ಮಾಯೆ (ಲೈಂಗಿಕ ಆಸೆ) ಇರಲು ಹೇಗೆ ಸಾಧ್ಯ? ಅಲ್ಲದೆ, ಶಿವನ ಸಂಕೇತವಾದ ಅಲ್ಲಮನಿಗೆ ಲೈಂಗಿಕ ಆಸೆ ಇರಲು ಹೇಗೆ ಸಾಧ್ಯ? ಭೌತಿಕ ಶರೀರಕ್ಕಿರಬೇಕಾದ ಆಸೆರೋಷಗಳನ್ನು ಅಲ್ಲಮ ಆಧ್ಯಾತ್ಮದ ಬೆಂಕಿಯಲ್ಲಿ ಸುಟ್ಟಿದ್ದ ಎಂಬ ದಾರ್ಶನಿಕ ಸತ್ಯವನ್ನು ಚಾಮರಸ ಮತ್ತು ಶೂನ್ಯಸಂಪಾದನೆಕಾರರು ಕಾವ್ಯಾತ್ಮಕವಾಗಿ ಅಲ್ಲಮ ವ್ಯೋಮಶರೀರಿಯಾಗಿದ್ದ ಎನ್ನುತ್ತಾರೆ. ಹೀಗೆ ನೋಡಿದಾಗ ಚಾಮರಸ ಮತ್ತು ಶೂನ್ಯಸಂಪಾದನೆಕಾರರ ಅಲ್ಲಮನಿಗೂ ವಚನಗಳ ಅಲ್ಲಮನಿಗೂ ಈ ವಿಚಾರದಲ್ಲಿ ಏನೂ ವ್ಯತ್ಯಾಸವಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ಅಲ್ಲಮನ ಮಾಯೆ ಸಂಸಾರಿಗೆ ಅಧೋಮಾಯೆ, ಚಾಮರಸನಿಗೆ ಮಾಯಾದೇವಿ; ಅನುಭಾವಿಗೆ ಯಾವುದು ಊರ್ಧ್ವ ಮಾಯೆ ಎಂದು ಅಲ್ಲಮನ ಪರಿಭಾವಿಸುತ್ತಾನೋ ಅದು ಚಾಮರಸನಿಗೆ ವಿಮಲೆಯಾಗುತ್ತದೆ.

-----

ಮೇಲೆ ಕಂಡ ಅಂಕಿಗಳಲ್ಲಿ ಮೊದಲನೆಯದು ಪುಸ್ತಕ ಪ್ರಾಧಿಕಾರ ೨೦೦೧ ರಲ್ಲಿ ಪ್ರಕಟಿಸಿದ ಸಮಗ್ರವಚನಸಂಪುಟದ ಸಂಪುಟ ಸಂಖ್ಯೆಗೂ ಎರಡನೆಯ ಅಂಕಿ ಆ ಸಂಪುಟದಲ್ಲಿರುವ ವಚನದ ಅನುಕ್ರಮ ಸಂಖ್ಯೆಗೂ ಅನ್ವಯಿಸುತ್ತವೆ.





# ಅಕ್ಕನ ವಚನಗಳ ನಿರ್ವಚನ

**ಬಿದರಹಳ್ಳಿ ನರಸಿಂಹಮೂರ್ತಿ**
'ಅನಿಮಿಷ', ಕ್ರಾಸ್-7, ದುರ್ಗಿಗುಡಿ
ಹಂತ 1, ಹೊನ್ನಾಳಿ – 577 217
ದಾವಣಗೆರೆ ಜಿಲ್ಲೆ
98801 30203

ಕೈಸಿರಿಯ ದಂಡವ ಕೊಳಬಹುದಲ್ಲದೆ,
ಮೈಸಿರಿಯ ದಂಡವ ಕೊಳಲುಂಟೆ?
ಉಟ್ಟಂತಉಡಿಗೆತೊಡಿಗೆಯನೆಲ್ಲ ಸೆಳೆದುಕೊಳ್ಳಬಹುದಲ್ಲದೆ,
ಮುಚ್ಚಿ ಮುಸುಕಿದ್ದ ನಿರ್ವಾಣವ ಸೆಳೆದುಕೊಳಬಹುದೆ?
ಚೆನ್ನಮಲ್ಲಿಕಾರ್ಜುನದೇವರ ಬೆಳಗನುಟ್ಟು ಲಜ್ಜೆಗೆಟ್ಟವಳಿಗೆ
ಉಡುಗೆತೊಡಿಗೆಯ ಹಂಗೇಕೊ ಮರುಳೆ?!

(ವಚನ ಕಮ್ಮಟ, ಸಂ: ಕೆ.ಮರುಳಸಿದ್ದಪ್ಪ, ಕಿ.ರಂ.ನಾಗರಾಜ, ೧೯೮೬, ಪುಟ ೬೪)

ಅಚಾನಕ್ಕಾಗಿ ದಾಳಿಮಾಡಿ ದಂಡವಿಧಿಸುವಂತೆ ಕೈಸಿರಿಯನ್ನ ಅಂದರೆ ಕೈಲಿರುವ ಹಣ ವಸ್ತ್ರಾಭರಣ ಮುಂತಾದ ಹೇರಿಕೊಂಡ ಹೊರಸಂಪತ್ತಿನ ಐಸಿರಿಯನ್ನ ಯಾರೊ ದೋಚಿಕೊಂಡೊಯ್ದಾರು. ಆದರೆ ಮೈಸಿರಿ ಅರ್ಥಾತ್ ನಿಸರ್ಗದತ್ತ ಚೆಲುವನ್ನಾಗಲಿ, ಆ ಚೆಲುನಿಲುವಿಗೆ ನಿಸರ್ಗವೆ ಹೊದಿಸಿದ ನಿರ್ವಾಣಿ ಬೆಳಕಿನ ದೀಪ್ತಿಯನ್ನಾಗಲಿ ದೇಹದಿಂದ ಬೇರ್ಪಡಿಸಿ ಒಯ್ಯಲು ಸಾಧ್ಯವಿಲ್ಲ. ಬಲಾತ್ಕಾರ ಭೋಗಕ್ಕೊಳಗಾದವರ ಮೈಮನ ಘಾಸಿಗೊಂಡಾಗಲು ಮೈಸಿರಿ ಉಳಿದೇಯಿರತ್ತೆ. ಮೈಗಂಟಿದ ಮೈಸಿರಿಯನ್ನ ಕೈಸಿರಿಯಂತೆ ಕಿತ್ತುಕೊಂಡೊಯ್ಯಲು ಸಾಧ್ಯವಿಲ್ಲ ಅನ್ನುತ್ತಾಳೆ ಅಕ್ಕ. ಅರ್ಥಪಲ್ಲಟವಿಲ್ಲದ ಸಣ್ಣಪುಟ್ಟ ಬದಲಾವಣೆಗಳೊಡನೆ ಈ ವಚನ ಡಾ.ಎಲ್.ಬಸವರಾಜು ಸಂಪಾದಿಸಿದ 'ಅಕ್ಕನ ವಚನಗಳು'(೧೯೭೭,ಪು.೮೫) ಹಾಗು ಡಾ. ವೀರಣ್ಣರಾಜೂರ ಸಂಪಾದಿಸಿದ 'ಶಿವಶರಣೆಯರ ವಚನ ಸಂಪುಟ'(ಸ.ವ.ಸಂ.೫,೧೯೯೩,ವ.೧೫೧,ಪು.೪೭) ಸಂಕಲನಗಳಲ್ಲು ಕಾಣಿಸಿಕೊಳ್ಳುತ್ತದೆ. ಅಪರೂಪದ ಅನುಭಾವಿ ಅಕ್ಕನ "ಮುಚ್ಚಿ ಮುಸುಕಿದ್ದ ನಿರ್ವಾಣ"ವೆಂಬ ಬೆಳಗಿನುಡುಗೆ ಯಾರೂ ಸೆಳೆದುಕೊಂಡು ಹೋಗಲಾರದಂತಿತ್ತು. ಸ್ವಂತಣ್ಣಗಿಂತ ಮಿಗಿಲಾದಣ್ಣ ಕೃಷ್ಣನಿತ್ತ ಅಂತ್ಯವೇಯಿಲ್ಲದ ಅಕ್ಷಯಾಂಬರದಿಂದ ಮೈಮಾನ ಕಾಪಾಡಿಕೊಂಡ ದ್ರೌಪದಿ ನಿಂತಲ್ಲೆ ಕಾಲೂರಿ ನಿಂತಳು. ಅಲೌಕಿಕ ಗಂಡ ಚೆನ್ನಮಲ್ಲಿಕಾರ್ಜುನ ಉಡಿಸಿದ ಬೆಳಗಿನುಡುಗೆ ಉಟ್ಟ ಮಹಾದೇವಿಯಕ್ಕಜಗಜ್ಜನರ (ಮಂ)ಕುದೃಷ್ಟಿಗೆ ದಿವ್ಯಾಂಜನ ಹಚ್ಚುವಂಥ ಅನುಭಾವಿಕ

ಚೆಲುವಿಕೆಯಲ್ಲಿ ಪ್ರಜ್ವಲಿಸುತ್ತಲೆ ಈ ಜಗತ್ತು ದಾಟಿ ಹೋದಳು. ತನ್ನೊಡಲಲ್ಲಿ ಚೆನ್ನಮಲ್ಲಿಕನ ಅರಿವಲಗು ಮುರಿದುಕೊಂಡವಳಿಗೆ, ಲೋಕದ ಲಜ್ಜೆಗೆ ಅತೀತಳಾಗಿ ಸುತ್ತಲವರ ಕಣ್ಣು ಕೋರೈಸುವಂತೆ ಅರಿವಿನ ದಿವ್ಯಾಂಬರ ಉಟ್ಟವಳಿಗೆ, ನಿಖರ ತಿಳುವಳಿಕೆಯೆಂಬ ಬೆಳಕಿನುಡುಗೆ ಉಟ್ಟವಳಿಗೆ ಭೌತಿಕ ಉಡುಗೆ ತೊಡಿಗೆ ಹಂಗುಂಟೆ? –ಇದು ಇಲ್ಲಿನ ತಾತ್ಪರ್ಯ.

ಇಲ್ಲೊಂದು ಚರ್ಚಾಸ್ಪದ ಸಂಗತಿ ಪ್ರಸ್ತಾಪಿಸಬಹುದು. ಅಕ್ಕ ಬರಿ ಪೌರಾಣಿಕ ಪಾತ್ರವಲ್ಲ; ಕೇವಲ ಕಲ್ಪಿತ ಕಾವ್ಯ ನಾಯಕಿಯಲ್ಲ; ಜೀವ ಜೀವಂತ ಚಾರಿತ್ರಿಕ ವ್ಯಕ್ತಿ. ಬೆಂದು ಬೆಂದು ಬದುಕಿ ಸ್ತ್ರೀಕುಲದ ಮುಕುಟ ಮಣಿಯಾದವಳು. ಚರಿತ್ರೆ ಅಂದಕೂಡಲೆ ಸತ್ಯಸ್ಯ ಸತ್ಯವನ್ನು ಒರೆಗೆ ಹಚ್ಚಿ ನೋಡುವ ಇರಾದೆ ಇದ್ದೇಯಿರತ್ತೆ. ನಮ್ಮ ಕೆಲವು ಕತೆಗಾರರು ಕಾದಂಬರಿಕಾರರು ನಾಟಕಕಾರರು ಚಿತ್ರಕಾರರು ರಂಗಭೂಮಿ\ಸಿನಿಮಾ ನಿರ್ದೇಶಕರು ಅಕ್ಕನ ಮಾನರಕ್ಷಣೆಗೆ ಕಂಕಣಬದ್ಧರಾದವರಂತೆ ಅವಳ ನೀಳಕೇಶರಾಶಿ ಆಂಶಿಕವಾಗಷ್ಟೆ ಅಲ್ಲ, ಮೈಪೂರ್ತಿ ಮುಚ್ಚಿತ್ತೆಂಬ ಅತಿಮಾನುಷ ಕಲ್ಪನೆ ವಿಸ್ತರಿಸುತ್ತಾರೆ. ಪೂರ್ತಿ ಮೈಮುಚ್ಚುವ ಪೂರ್ಣ ಕೇಶಾಂಬರ, ಕಾಶಾಯಾಂಬರ ಅಥವ ಚರ್ಮಾಂಬರದಲ್ಲಿ ಅವಳ ಕಾಣಿಸಲೆತ್ನಿಸುತ್ತಾರೆ. ಅದೇ ಚಾರಿತ್ರಿಕ ಸತ್ಯ ಎಂಬ ಬಗ್ಗೆ ಅವರ ಬಳಿ ಯಾವ ಸುಸ್ಪಷ್ಟ ಸಾಕ್ಷಿ–ಪುರಾವೆಗಳಿಲ್ಲದಿದ್ದರೂ ಸಾಂದರ್ಭಿಕ ಸದುದ್ದೇಶ ಮತ್ತು ಅಕ್ಕನ ಕುರಿತ ಅತೀವ ಗೌರವಾದರದಿಂದ ಹೀಗೆ ಮಾಡುತ್ತಾರೆ ಎನ್ನಿಸುತ್ತದೆ. ಅಂದರೆ ಭೌತಿಕ ಲಜ್ಜೆ ದಾಟಿ ಅನುಭಾವಿಕ ದಿಗಂಬರತ್ವಕ್ಕೆ ಸಂದು ಅಕ್ಕ ನಿಸ್ಸೀಮಳಾದ ಮಹಾಸತ್ಯ ಅವರಿಗೆ ಸರಿಯಾಗಿ ಅರ್ಥವಾಗಲಿಲ್ಲವೆ? ಅರ್ಥವಾದರೂ ಲೋಕಾಪವಾದಕ್ಕೆ ಅಂಜಿ ಅದನ್ನು ಮರೆಮಾಚುತ್ತಿರುವರೆ? ಯಾಕೆಂದರೆ ಅಕ್ಕ ಪರಿಪೂರ್ಣ ದಿಗಂಬರಿಯಾಗಿ ನಡೆದದ್ದರ ವಿವರಣೆ ಹರಿಹರ ಚಾಮರಸರ ಕಾವ್ಯಗಳಲ್ಲಿ ಹಾಗು ಶೂನ್ಯ ಸಂಪಾದನೆಯಲ್ಲಿದೆ. ಜೊತೆಗೆ ಅಕ್ಕ ಅಲ್ಲಮನ ಪ್ರಚಂಡ ವಚನ–ಸಂವಾದ, ಮೊನಚು ಭಾಷಿಕ–ಸೂಚನೆ ಈ ಅಭಿಮಾನಿಗಳ ನಿಲುವನ್ನು ನಿರಾಕರಿಸುವಂತೆ ಕಾಣಿಸುತ್ತವೆ. ಅಷ್ಟೆ ಅಲ್ಲದೆ, ಆ ಪ್ರಸಂಗದ ಹೊರತಾಗಿಯೂ, ಅಕ್ಕ ತನ್ನನು ಭಾವಿಕ ಚಾರಣದ ಕಡುಕಷ್ಟಗಳ ಬಗ್ಗೆ ರಚಿಸಿರುವ ಇನ್ನಿತರ ದಿಟ್ಟ ವಚನಗಳೂ ಅಂಥ ಪೂರ್ಣಾಂಬರದ ಸಾಧ್ಯತೆಯನ್ನು ತಳ್ಳಿಹಾಕುವಂತಿವೆ. ಆ ಕಾಲಘಟ್ಟದಲ್ಲಿ ಏಕಾಕಿಯಾಗಿ ದಿಗಂಬರಿಯಾಗಿ ಉಡುತಡಿಯಿಂದ ಕಲ್ಯಾಣಕ್ಕೆ, ಅಲ್ಲಿಂದ ಶ್ರೀಶೈಲಕ್ಕೆ ಕಾಲ್ನಡಿಗೆಯಲ್ಲಿ ಹೋದಾಗ ಸಂಭವಿಸಿರಬಹುದಾದ ಘಟನೆಗಳ ಪಡಿನೆಳಲಹಾಗಿವೆ ಅವಳ ಈ ಕೆಲವು ನಿರ್ದಿಷ್ಟ ಸಾಲುಗಳು: "ಚೆನ್ನಮಲ್ಲಿಕಾರ್ಜುನ ದೇವರ ಬೆಳಗನುಟ್ಟು  ಲಜ್ಜೆಗೆಟ್ಟವಳಿಗೆ\ ಉಡುಗೆ ತೊಡಿಗೆಯ ಹಂಗೇಕೊ ಮರುಳೆ?!" ಎಂಬ ಪ್ರಸ್ತುತ ವಚನದ ಸಾಲುಗಳಲ್ಲಿ ತಾನುಟ್ಟದ್ದು ಮಹಾಬೆಳಕನ್ನಷ್ಟೆ, ಅದು ಕತ್ತಲ ಕಣ್ಣುಗಳಿಗೆ ಬೆತ್ತಲಂತೆ ಗೋಚರಿಸಿತು ಎಂಬ ಅವಳ ಭಾವದರ್ಶನ ಅಡಗಿದೆ. "ಬೆಟ್ಟದ ಮೇಲೊಂದು ಮನೆಯ ಮಾಡಿ\ ಮೃಗಗಳಿಗಂಜಿದೊಡೆಂತಯ್ಯ?" ಎಂಬ ಸಾಲುಗಳು ಸಾಧಾರಣ ಅರ್ಥದ ಜೊತೆಗೆ, ಮಲ್ಲಿಕಾರ್ಜುನನ ಮೇಲೆ ಮನಸ್ಸಿಟ್ಟು ಆ ಸಿರಿಬೆಟ್ಟದೊಡೆಯನ ಚೆಲುವಿನ ಮನೆಗೆ ಹೋಗುವ ದುರ್ಗಮ ದಾರಿಯಲ್ಲಿ ಒಂಟಿ ಹೆಣ್ಣೆಂದು ಅಡ್ಡಗಟ್ಟಿ ಕಾಡಿದ ಪುರುಷಾ ಮೃಗಗಳನ್ನೂ ಸೂಚಿಸುವಂತೆ ಕಾಣುತ್ತದೆ. "ಹೆಣ್ಣ ಬಿಟ್ಟಬಳಿಕ ಆಕೆಯನಾರು ಕೂಡಿದರೇನು?... ಚೆನ್ನಮಲ್ಲಿಕಾರ್ಜುನನ ಅರಿದ ಬಳಿಕ\ ಆ ಕಾಯವ ನಾಯಿ ತಿಂದರೇನು



ನೀರ ಕುಡಿದರೇನು?!" ಎಂಬ ಸಾಲುಗಳು ದೇಹವನ್ನು ಯಾರೊ ಆಕ್ರಮಿಸಿಯಾರೆ ಹೊರತು ಆತ್ಮವನ್ನು ಆಕ್ರಮಿಸಲು ಸಾಧ್ಯವೇಯಿಲ್ಲ, ಆದ್ದರಿಂದ ದೇಹಭಂಗ ದುಃಖ\ಪಾಪ ಆತ್ಮಕ್ಕೆ ಮೆತ್ತಿಕೊಳ್ಳುವುದಿಲ್ಲ ಎಂಬ ಸ್ಪಷ್ಟಣೆ ನೀಡುತ್ತವೆ; "ಬಟ್ಟ ಮೊಲೆಯ ಭರದ ಜವ್ವನದ ಚೆಲುವ ಕಂಡು ಬಂದಿರಣ್ಣಾ\ಅಣ್ಣಾ ನಾನು ಹೆಂಗೂಸಲ್ಲ! ಅಣ್ಣಾ ನಾನು ಸೂಳೆಯಲ್ಲ!"– ಈ ಸಾಲುಗಳು ದಾರಿಗಡ್ಡ ಬಂದ ಧೂರ್ತರನ್ನು ಎದುರಿಸಿದ್ದನ್ನ, ಕಿನ್ನರಿ ಬೊಮ್ಮಯ್ಯನಂಥ ಸಾಧಕರನ್ನು ಆಧ್ಯಾತ್ಮಿಕ ಶಕ್ತಿ ಮತ್ತು ಅನುಭಾವಿಕ ಗರಿಮೆಯಿಂದ ಗೆದ್ದದ್ದನ್ನ ನೆನಪಿಸುತ್ತದೆ. "ನಿಮ್ಮ ಜಂಗಮಲಿಂಗದೊಡನಾಡಿ ಎನ್ನ ಭವಾದಿಭವಂಗಳು\ ಕೆಟ್ಟಕೇಡ ನೋಡಾ ಚೆನ್ನಮಲ್ಲಿಕಾರ್ಜುನ!" ಮುಂತಾದ ಸಾಲುಗಳು ಅಕ್ಕನ ಭವದುಃಖವನ್ನ ಜಂಗಮಶಕ್ತಿಯೆ ನಿರ್ನಾಮ ಮಾಡಿತೆಂದು ಪ್ರಮಾಣೀಕರಿಸುತ್ತವೆ. ಒಟ್ಟಿನಲ್ಲಿ ಅಕ್ಕನ ಪೂರ್ಣಾಂಬರ ಅಥವ ಸಂಪೂರ್ಣ ದಿಗಂಬರತೆ ವಸ್ತುಸ್ಥಿತಿ ಕೋರ್ಟ್ ಭಾಷೆ, ವಾದ–ಪ್ರತಿವಾದ ಮಂಡನೆಯಿಂದ ನಿಕ್ಕಿಗೊಳ್ಳಲಾರದು. ಸಂವಾದ ಒಮ್ಮತಕ್ಕೆ ಒಗ್ಗಲಾರದ ಅಂಥ ವಾದ–ಪ್ರತಿವಾದಗಳು ಕಡೆತಕನ ಸಮಾನಾಂತರ ರೈಲ್ವೆ ಹಳಿಗಳಂತೆ ಪ್ರತ್ಯೇಕ ಸಾಗುವಂತವು. ಈ ವಿಷಯದಲ್ಲಿ ಸರ್ವಸಮ್ಮತ ನೆಲೆಯ ಆತ್ಯಂತಿಕ ಸತ್ಯ (ಆಬ್ಜೆಕ್ಟಿವ್\ಆಬ್ಸಲೂಟ್‌ಟ್ರುತ್) ಸಾಧಿಸುವುದು ಅಸಾಧ್ಯವಾದುದರಿಂದ ವೈಯಕ್ತಿಕ ನೆಲೆಯ ಸತ್ಯಕ್ಕೆ (ಸಬ್ಜೆಕ್ಟಿವ್‌ಟ್ರುತ್) ಅಂದರೆ ಅವರವರ ಭಾವಕ್ಕೆ ಅವರವರ ಭಕ್ತಿಗೆ ಅವರವರ ಕಲ್ಪನಾ ಸ್ವಾತಂತ್ರ್ಯಕ್ಕೆ ಹಾಗು ಅವರವರ ಚಾರಿತ್ರಿಕ ಅನುಸಂಧಾನಕ್ಕೆ ಬಿಟ್ಟು ಬಿಡುವುದೆ ಸೂಕ್ತವೆನ್ನಿಸುತ್ತದೆ. ಮಹಾದೇವಿಯಕ್ಕನ ಅನುಭಾವಿಕ ಘನತೆಗೆ ಇದೆಲ್ಲದರಿಂದ ಎಂದಿಗೂ ಕುಂದಿಲ್ಲವಷ್ಟೆ?

ವೈದಿಕ ಸಂಸ್ಕೃತಿ ಚರಿತ್ರೆ, ವೀರಶೈವ\ಲಿಂಗಾಯತ ಸಂಸ್ಕೃತಿ ಚರಿತ್ರೆ, ಅಷ್ಟೆ ಯಾಕೆ ಅಖಂಡ ವಿಶ್ವದ ಇಡಿ ಮನುಕುಲದ ಸಂಸ್ಕೃತಿ ಚರಿತ್ರೆಯಲ್ಲೆಲ್ಲೂ ಅಕ್ಕನಂತೆ ದಿಕ್ಕುದಿಂಬರಿಯಾಗಿ ಬಯಲದೇಹಿ ಭವಹರನ ಬಯಬಯಸಿ ಬಯಲಾಗಿ ಹೋದ ಮತ್ತೊಬ್ಬ ಹೆಣ್ಣು ಮಗಳ ಪ್ರಸ್ತಾಪವಿದ್ದಂತಿಲ್ಲ. ಆದರೆ ಅಕ್ಕನ ಕಾಲಕ್ಕೆ ಅಥವ ಅದಕ್ಕೂ ಮುಂಚೆ ಭರತ ಖಂಡದಲ್ಲಿ ಜೈನಧರ್ಮದ ದಿಗಂಬರ ಮುನಿಗಳಂತೆ ದಿಗಂಬರ ಸಂನ್ಯಾಸಿನಿಯರಿದ್ದರೆ? ಅವರ ಪ್ರತ್ಯಕ್ಷ ಪ್ರಭಾವ, ಪರೋಕ್ಷ ಪರಿಣಾಮ ಅಕ್ಕನ ಮೇಲಾಗಿತ್ತೆ ಗೊತ್ತಿಲ್ಲ. ಅಥವ ದುಶ್ಶಾಸನನಂತೆ ಭಂಡ ಗಂಡ ಕೌಶಿಕನೆ ಅವಳುಟ್ಟ ಸೀರೆ ಸೆಳೆದಾಕ್ಷಣ ಫಕ್ಕನೆ ಬೆತ್ತಲಾದಕ್ಕ ಸಿಟ್ಟು ಅವಮಾನ ಹತಾಶೆ ನುಂಗಿ ಆ ನಿರಸನದ ದಿವ್ಯ ಕ್ಷಣವಿತ್ತ ಬಿಡುಗಡೆಯ ತನ್ನ ಪಾಲಿಗೆ ದಿವ್ಯತರ ಅರಿವು, ಅದೆ ತನ್ನ ದಿವ್ಯ ತಮ ಬೆಳಕಿನ ಅರಿವೆ ಎಂದು ಪರಿಭಾವಿಸಿ ಏಕಾಯೇಕಿ ದಿಗಂಬರ ಪಥಗಾಮಿನಿಯಾಗಿ ನಡೆದದ್ದು ಅಕಸ್ಮಾತ್ತಾದ ಘಟನೆಯೆ? ಆ ಘೋರಾನುಭವ ದೊಡಲಲ್ಲೆ ನಗ್ನಸತ್ಯದ ಸ್ವಾನುಭಾವ ಮಿಂಚಿ ಮಾರ್ಪೊಳೆಯಿತೆ? ನಿರಂತರ ಮುಚ್ಚಿ ಮುಸುಕಿರುವ ನಿರ್ವಾಣಾಂಬರಕ್ಕೆ ಅಕ್ಕ ಹಾಗೆ ಒಗ್ಗಿಹೋದಳೆ?

ಗಂಗಾಂಬಿಕೆ ನೀಲಾಂಬಿಕೆಯರ ಉಭಯ ರಮಣ ಮಹಾಶರಣ ಬಸವಣ್ಣ ಚಿಕ್ಕ ಕೂಸಿನಂತಾಗಿ ಹೋದ, ಮಹಾಮನೆಗೆ ಕಾಲಿಟ್ಟ ಪರಿಪೂರ್ಣ ದಿಗಂಬರಿ ಅಕ್ಕನನ್ನು ಕಂಡಕೂಡಲೆ. ಅವಳೆ 'ಎನ್ನ ಹೆತ್ತತಾಯಿ' ಎನ್ನುವ ಅವನ ವಚನ ಮುಗ್ಧ ಶಿಶುಭಾವ ಮತ್ತು ಪರಮಾವಧಿ ವಿನಯದ ಶಿಖರದಂತಿದೆ: ಕಾಯದ ಲಜ್ಜೆಯ ಕಲ್ಪಿತವ ಕಳೆದು\

ಜೀವದ ಲಜ್ಜೆಯ ಮೋಹವನಳಿದು\ ಮನದ ಲಜ್ಜೆಯ ನೆನಹ ಸುಟ್ಟು\ ಭಾವದಕೂಟ ಬೆತ್ತಲೆಯೆಂದರಿದು\ ತವಕ ಸ್ನೇಹ ವ್ಯವಹಾರಕ್ಕೆ ಹೊಗದು\ ಕೂಡಲ ಸಂಗಮದೇವಯ್ಯ\ ಎನ್ನ ಹೆತ್ತತಾಯಿ ಮಹಾದೇವಿಯಕ್ಕನ ನಿಲವ ನೋಡಾ ಪ್ರಭುವೆ (ಅಕ್ಕನ ವಚನಗಳು, ಸಂ:ಡಾ.ಎಲ್.ಬಿ, ೧೯೭೭, ಪೀಠಿಕೆ ಪುಟ೪೭-೮). ಅಕ್ಕನ ಅಲೌಕಿಕ ನಿಲುವತಾನಷ್ಟೆ ಮನಗಂಡು ಸುಮ್ಮನಾಗದೆ, ಪ್ರಚಂಡ ವಿಮರ್ಶಕ ಪ್ರಭುದೇವನೂ ಅರಿವಂತೆ ಮಾಡುವುದೆ ಬಸವಣ್ಣನ ತಾಯ್ಭಕ್ತಿಯ ದೊಡ್ಡತನ. ತನ್ನನ್ನೆ ಮರೆತು ಇದಿರಿನಲ್ಲಿ ತಲ್ಲೀನವಾಗುವ ನಿರಾಳ ಮನಸ್ಸಿಗೆ ಮಾತ್ರ ಸಾಧ್ಯವಾಗುವ ತಾದಾತ್ಮ್ಯವಿದು. ಕಾಯದ ಲಜ್ಜೆ ಎಂಬುದು ಸುಸಂಸ್ಕೃತ ಮಾನವ ಸಮಾಜದ ಸ್ವಕಪೋಲಕಲ್ಪಿತ ಪರಿಕಲ್ಪನೆಯಷ್ಟೆ? ಯಾಕೆಂದರೆ ಇಡಿ ಸೃಷ್ಟಿಯಲ್ಲಿ ಸಸ್ಯಲೋಕ ಪ್ರಾಣಿಲೋಕ ಪಕ್ಷಿಲೋಕ ಪಂಚಮಹಾಭೂತಗಳೆಲ್ಲವೂ ಅನಾದಿಕಾಲದಿಂದಲೆ ಬೆತ್ತಲಾಗಿವೆ. ಅವ್ಯಾವೂ ತಮ್ಮ ಸಹಜ ಬೆತ್ತಲೆ ಬಗ್ಗೆ ಲಜ್ಜೆ ತಾಳವು. ಬೆಸಲಾಗುವ ಗಳಿಗೆ ಹೆರುವ ಸಂಕಟದ ತಾಯಿ ಮತ್ತು ಹೆತ್ತ ಮಗು ಬೆತ್ತಲಾಗಿಯೆ ಇರುವರಷ್ಟೆ? ಅಣ್ಣ ಹೇಳುವಂತೆ ಕಾಯ, ಜೀವ, ಮನ- ಈ ಮೂರರ ಲಜ್ಜೆಯನ್ನೂ ಗೆದ್ದವಳು ಅಕ್ಕ. ಕಾಯ ಬೆತ್ತಲಾಗಿದೆಯೆಂಬ ಕಲ್ಪನೆಯನ್ನೆ ಕಿತ್ತೊಗೆದವಳಾದ್ದರಿಂದ ಆ ಕುರಿತ ಲಜ್ಜೆಯಿಲ್ಲ. ಜೀವದ ಬೆತ್ತಲೆ ಕುರಿತ ವ್ಯಾಮೋಹ ಅಳಿಸಿಹಾಕಿದ್ದರಿಂದ ಅದನ್ನು ಕುರಿತ ಲಜ್ಜೆಯೂಇಲ್ಲ. ಮನ ಸದಾ ಬೆತ್ತಲಾಗಿಯೆ ಇರುವುದೆಂಬುದರ ನೆನಹನ್ನೆ ಸುಟ್ಟು ಹಾಕಿ ಅದರ ಕುರಿತ ಲಜ್ಜೆಯೂ ನಾಸ್ತಿಯಾಗಿದೆ. ಇನ್ನು ಎದೆಯೊಳಗಿನ ಭಾವವಂತೂ ಹುಟ್ಟಾ ದಿಗಂಬರಿ. ಭಾವದ ಕೂಟವೇನಿದ್ದರೂ ಬೆತ್ತಲೆಯೊಡನೆ ಮಾತ್ರ, ಅದಕ್ಕೆತನ್ನ ಸಹಜ ಬೆತ್ತಲಬಗ್ಗೆ ಲಜ್ಜೆಯಿಲ್ಲವೇಯಿಲ್ಲ. ಅಂತೆಯೆ ಕೃತಕ ಉಡುಗೆ ತೊಡುಗೆ ಕೃತ್ರಿಮ ಅಲಂಕರಣದ ಹಂಗೂ ಇಲ್ಲ. ಅಚ್ಚ ಸ್ವಚ್ಛ ನೈಸರ್ಗಿಕ ನಿಲುವೆ ನಿಜವಾದ ಚೆಲುವು, ಅದೆ ತನ್ನರಿವೆ ಎಂಬ ಅನುಭಾವಿಕ ತನ್ನರಿವು ಆತ್ಮದಲ್ಲೂರಿಕೊಂಡುಬಿಟ್ಟಿದೆ.

ಆದಿತ್ಯ ಸೋಮರು ಆಗಿಹೋಗುತ್ತ ಇದ್ದಾರು,
ಬ್ರಹ್ಮ ಪ್ರಳಯಕ್ಕೊಳಗಾದ, ಹರಿಯ ಸಿಂಹಾಸನವಡಗಿತ್ತು.
ಅತೋನಾಸ್ತಿ, ಇತೋನಾಸ್ತಿ!
ರೋಮಜರೆಂಬವರು ನಿಟ್ಟು ಗುಟ್ಟಿತರುಮರನಡಿಯಲ್ಲಿದ್ದರು.
ಮಾರ್ಕಂಡೇಯ ಮಹಾಮುನಿ ಸ್ವೇಚ್ಛಾಮರಣಿ ಎನಿಸಿಕೊಂಡನಲ್ಲದೆ
ಲಿಂಗದ ನಿಜವನರಿಯನು.
ಇದು ಕಾರಣ ಕೂಡಲಸಂಗಮದೇವಾ
ನೀವು ಮಾಡಿ ಬಯಲು ಭಕ್ಷಿಸಿತ್ತು, ಅನಂತ ಹಿರಿಯರನು.



## ವಚನ ರಸಪ್ರಶ್ನೆ ಸ್ಪರ್ಧೆ

### ವಚನ ರಸಪ್ರಶ್ನೆ-೩೪ರ ಸರಿಯುತ್ತರಗಳು

೧. (ಇ) ಅಲ್ಲಮ ೨. (ಅ) ಮಾಂಸದ ಚೂರು 3. (ಈ) ಹೆಂಡದ ಮಾರಯ್ಯ
೪. (ಆ) ವೀರಶೂರ ರಾಮೇಶ್ವರ ಲಿಂಗ ೫. (ಇ) ಹೊಗಳಿಕೆ

'ಮಹಾಮನೆ'ಯ "ವಚನ ರಸಪ್ರಶ್ನೆ-೩೪"ರ ಸರಿ ಉತ್ತರವನ್ನು ಕಳಿಸಿರುತ್ತಾರೆ. ಅವರಿಗೆ ಈ ಸಂಚಿಕೆಯ ಬಹುಮಾನವನ್ನು ಅಂಚೆ ಮೂಲಕ ಕಳಿಸಲಾಗಿದೆ.

**೧. ಬಿ.ಎಂ. ಸದಾಶಿವಪ್ಪ ಶ್ಯಾಗೆಲೆ, ದಾವಣಗೆರೆ**

**೨. ಬಸವರಾಜ ಹೂಗಾರ, ಬಾಗಲಕೋಟೆ**

### ವಚನ ರಸಪ್ರಶ್ನೆ ~ ೩೫ರ ಪ್ರಶ್ನೆಗಳು

**೧.'ಶರಣ ಸಂಪದ' ಕೃತಿಯ ಕೃತಿಕಾರರು?**

(ಅ) ಪ್ರೊ. ಮಹೇಶ ತಿಪ್ಪಶೆಟ್ಟಿ (ಆ) ಎಸ್. ನಟರಾಜ ಬೂದಾಳು
(ಇ) ಪ್ರೊ. ಎಸ್. ಉಮಾಪತಿ (ಈ) ಓ.ಎಲ್. ನಾಗಭೂಷಣಸ್ವಾಮಿ

**೨. ಡಾ. ಲತಾ ಮೈಸೂರು ಅವರು ಬರೆದಿರುವ ಕೃತಿಯ ಹೆಸರು:**

(ಅ) ಬಸವಣ್ಣನ ಕಲ್ಯಾಣ ಹುಡುಕುತ್ತ (ಆ) ಬಸವತತ್ತ್ವ
(ಇ) ಕೂಡಲ ಸಂಗಮ (ಈ) ಬಸವಣ್ಣನ ಕಲ್ಯಾಣ

**೩. 'ನಿರ್ಭಯದ ನಿಲುವು' ಯಾರ ಕೃತಿ?**

(ಅ) ಜಯಾ ರಾಜಶೇಖರ್ (ಆ) ಶಾಂತಾ ಇಮ್ರಾಪುರ
(ಇ) ವೀಣಾ ಬನ್ನಂಜೆ (ಈ) ವಿಜಯ ದಬ್ಬೆ

**೪. 'ಪರಮಗುರು ಪಡುವಿಡಿಸಿದ್ಧ ಮಲ್ಲಿನಾಥಪ್ರಭು' ಇದು ಯಾರ ಅಂಕಿತ ನಾಮ?**

(ಅ) ಹೇಮಗಲ್ಲ ಹಂಪ (ಆ) ಆದಯ್ಯ
(ಇ) ಡೋಹರ ಕಕ್ಕಯ್ಯ (ಈ) ಅಕ್ಕಮ್ಮ

**೫. 'ರಾವುತಿಕೆ' ಎನ್ನುವ ಪದದ ಅರ್ಥ:**

(ಅ) ಕುಂಬಾರಿಕೆ (ಆ) ದೊಡ್ಡದು
(ಇ) ರಾಹುವಿನ ಹಿಡಿತ (ಈ) ಕುದುರೆಯ ಸವಾರಿ

ಈ ಐದೂ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ಬರೆದು ಅಂಚೆಯ ಮೂಲಕ ಮಾತ್ರ ಕಳಿಸಬೇಕು. ಐದೂ ಉತ್ತರಗಳು ಸರಿಯಾಗಿರುವ ಪತ್ರಗಳನ್ನು ಮಾತ್ರ ಸ್ಪರ್ಧೆಗೆ ಪರಿಗಣಿಸಲಾಗುವುದು. ಇಂಥ ಪತ್ರಗಳಲ್ಲಿ ಲಾಟರಿಯ ಮೂಲಕ ಇಬ್ಬರ ಉತ್ತರಗಳನ್ನು ಆಯ್ದು, ಅವರಿಗೆ ಪುಸ್ತಕ ರೂಪದಲ್ಲಿ ಬಹುಮಾನವನ್ನು ಕಳಿಸಲಾಗುವುದು. ನಿಮ್ಮ ಉತ್ತರಗಳು ಬರಲು ಪ್ರತಿ ತಿಂಗಳ ೨೦ನೆಯ ದಿನಾಂಕವು ಕೊನೆಯದಾಗಿರುತ್ತದೆ.

**ಅಂಚೆಯ ಮೂಲಕ ಮಾತ್ರ ನಿಮ್ಮ ಉತ್ತರಗಳು ತಲುಪಬೇಕಾದ ವಿಳಾಸ**

**ಅಧ್ಯಕ್ಷರು, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, "ವಚನ ರಸಪ್ರಶ್ನೆ", ೧ನೆಯ ಮುಖ್ಯರಸ್ತೆ, ಜಗದ್ಗುರು ಶ್ರೀ ಶಿವರಾತ್ರೀಶ್ವರ ವೃತ್ತ, ೮ನೆಯ ವಿಭಾಗ, ಜಯನಗರ, ಬೆಂಗಳೂರು-೫೬೦೦೭೦.**

# ಅಗಣಿತ

**ಡಾ. ಅಮರೇಶ ನುಗಡೋಣಿ**
*'ಸೂರು', ಎಂ.ಪಿ. ಪ್ರಕಾಶ ನಗರ,*
*ಮಾರ್ಕಂಡೇಶ್ವರ ಡಿಇಡಿ ಕಾಲೇಜು ಹತ್ತಿರ,*
*ಹೊಸಪೇಟೆ - ೫೮೩ ೨೦೧*
*ಬಳ್ಳಾರಿ ಜಿಲ್ಲೆ ಮೊ: ೯೪೮೦೧೫ ೭೯೪೫೯*

**ಹಡೆದೊಡವೆ ವಸ್ತುವನು ಮೃಢಭಕ್ತರಿಗಲ್ಲದೆ ಕಡಬಡ್ಡಿಯ ಕೊಡಲಾಗದು**
**ಬಂದರೊಂದು ಲೇಸು, ಬಾರದಿದ್ದರೆರಡು ಲೇಸು**
**ಅಲ್ಲಿದ್ದರೆಯೂ ಲಿಂಗಕ್ಕೆ ಬೋನ, ಇಲ್ಲಿದ್ದರೆಯೂ ಲಿಂಗಕ್ಕೆ ಬೋನ**
**ಲಿಂಗದೊಡವೆ ಲಿಂಗಕ್ಕೆ ಸಾರಿತ್ತಾಗಿ**
**ಬಂದಿತ್ತೆಂಬ ಪರಿಣಾಮವಿಲ್ಲ, ಬಾರದೆಂಬ ದುಃಖವಿಲ್ಲ**
**ಇದು ಕಾರಣ ಕೂಡಲಸಂಗಮದೇವಾ**
**ನಿಮ್ಮ ಶರಣರಿಗಲ್ಲದೆ ಕಡಬಡ್ಡಿಯ ಕೊಡಲಾಗದು**
**- ಬಸವಣ್ಣ**

ಈ ವಚನದ ತಿರುಳನ್ನು ಶೋಧಿಸುವುದಕ್ಕೆ ಕನ್ನಡ ಸಂಶೋಧಕರಲ್ಲಿ ಹಲವರು ಪ್ರಯತ್ನಿಸಿದ್ದಾರೆ. ಶೋಧದ ತಿರುಳಿನಲ್ಲಿ ಸಮಾನ ಅಂಶಗಳಿಲ್ಲದೆ ಹೋಗಿ ವಾದ, ಪ್ರತಿಪಾದಗಳು ನಡೆದಿವೆ. ಅವರವರು ಕಂಡುಕೊಂಡ ತಿರುಳುಗಳು ದಾಖಲಾಗಿವೆ.

ಈ ವಚನದಲ್ಲಿ ಮೇಲುನೋಟಕ್ಕೆ ಕೆಲವು ಅಂಶಗಳು ವ್ಯಕ್ತವಾಗಿವೆ.

೧. ಕಡಬಡ್ಡಿಯನ್ನು ಕೊಡುವ ವ್ಯವಸ್ಥೆಯಿದೆ.

೨. ಈ ಕಡಬಡ್ಡಿಗೆ ಕೊಡುವುದಾದರೆ ಶಿವನ ಭಕ್ತರಿಗೆ ಕೊಡಬೇಕು.

೩. ಮರಳಿ ಬಂದರೆ ಸರಿ, ಬಾರದಿದ್ದರೂ ಚಿಂತೆ ಪಡಬೇಕಾಗಿಲ್ಲ.

೪. ಯಾರು ಉಂಡರೂ ಅದು ಲಿಂಗಕ್ಕೆ ಸಲ್ಲುತ್ತದೆ.

೫. ಲಿಂಗದ ವಸ್ತು ಲಿಂಗಕ್ಕೆ ಸೇರಿದಂತೆ.

ಹಾಗೆ ನೋಡಿದರೆ ಈ ವಚನದ ತಿರುಳು ಸರಳವಾದದ್ದು ಅನ್ನಿಸುತ್ತದೆ. ಭಕ್ತನಾದ ಬಸವಣ್ಣನ ಗ್ರಹಿಕೆ ಸರಳ, ಸಹಜವಾದದ್ದು. ಆದರೆ ಎಲ್ಲರಲ್ಲೂ ಈ ಗ್ರಹಿಕೆ, ಅರಿವು ಇರಬೇಕು. ಇರದಿದ್ದರೆ ಸಂಘರ್ಷಕ್ಕೆ ದಾರಿಯಾಗುತ್ತದೆ. ಶರಣರ - ಭಕ್ತರ ಜೀವನ ಕ್ರಮದ ಹಿನ್ನೆಲೆಯಿಂದ ನೋಡಿದಾಗ ಇದರಲ್ಲಿ ಜಟಿಲವಾದದ್ದು ಏನೂ ಇಲ್ಲ.

ಬಸವಣ್ಣ ಕಟ್ಟಿದ ಹೊಸ ಸಮಾಜದಲ್ಲಿ ಶಿವನಭಕ್ತರಿಗೆ, ಶರಣರಿಗೆ ಹೆಚ್ಚಿನ ಆದ್ಯತೆಯನ್ನು ಕೊಡಲಾಗುತ್ತಾ ಬಂದಿದೆ. ಶರಣರನ್ನು ಉದಾಸೀನ ಮಾಡಬಾರದೆಂದು ಬಸವಣ್ಣ ವಿನಯದಿಂದಲೂ, ಕೋಪದಿಂದಲೂ ಹೇಳಿದ್ದಾನೆ. ಗೆರೆ ಕೊರೆದೂ ತಿಳಿಸಿದ್ದಾನೆ. ಆತನ ವಚನಗಳಿಂದ ಇದು ತಿಳಿಯುತ್ತದೆ. ನಮ್ಮ ಸಮಾಜದಲ್ಲಿ 'ಕೈಗಡ' ಎನ್ನುವ ಪದ್ಧತಿಯಿದೆ. ಈಗಲೂ ಜೀವಂತವಾಗಿದೆ. ಕೈಗಡದ ವ್ಯವಹಾರದಲ್ಲಿ ಸಹಾಯ, ನೆರವು ಇದೆ. ಒಬ್ಬರಿಗೊಬ್ಬರು, ಏನೋ ಕೊರತೆಯಾದಾಗ, ಇಲ್ಲದಾದಾಗ ಅಥವಾ ಆ ಸಂದರ್ಭದಲ್ಲಿ ಇಲ್ಲದಿರುವಾಗ ಬೇಡಿ ಪಡೆಯುವುದು ಮತ್ತು ಮರಳಿಸುವುದು. ಒಂದಕ್ಕೆ ಒಂದೇ. ಅಂದರೆ ಪಡೆದವರು, ಮರಳಿ ಕೊಡುವಾಗ ಪಡೆದಷ್ಟೇ ಕೊಡುವುದು ಪದ್ಧತಿ. ಕೊಟ್ಟವರು ಹೆಚ್ಚಿಗೆ ಬಯಸುವುದಿಲ್ಲ. ಒಬ್ಬರ ನೆರವಿಗೆ ಇನ್ನೊಬ್ಬರು ನೆರವಾಗುವ ಪದ್ಧತಿ ಸಾಮಾನ್ಯವಾಗಿ ಜಾತಿ ಮೀರಿದ ಪದ್ಧತಿಯಾಗಿತ್ತು.

ಮೇಲಿನ ವಚನದಲ್ಲಿ 'ಹಡದೊಡವೆ ವಸ್ತುವನು' ಎಂಬುದೇನು? ಯಾರು ಹೆಚ್ಚಿಗೆ ಸಂಪಾದಿಸಿಕೊಂಡಿರುತ್ತಾರೋ ಅವರು ಕಡಬಡ್ಡಿಗೆ ಕೊಡಬೇಕು. ಎಲ್ಲರಿಗಲ್ಲ. ಶಿವನ ಶರಣರಿಗೆ ಮಾತ್ರ ಎಂಬ ಸೂಚನೆಯಿದೆ. ವಚನ ಚಳುವಳಿಯ ಸಾಧನೆಗಳನ್ನು ನೋಡಿದರೆ, ಸಂಗ್ರಹ ಗುಣ ಯಾರಲ್ಲಿಯೂ ಇರಬಾರದು. ಶಿವನ ಶರಣರಂತೂ ಸಂಗ್ರಹದಿಂದ ದೂರವಿರುವವರು. ಈ ಶರಣರು ಕಡಬಡ್ಡಿಯನ್ನು ಪಡೆದುಕೊಳ್ಳುವ ಅಗತ್ಯವೇನು? ಬಸವಣ್ಣ ಯಾಕೆ ಸೂಚಿಸುತ್ತಾನೆ. 'ಹಡದೊಡವೆ ವಸ್ತುವನು' ಸಂಪಾದಿಸಿದವರು ಶರಣರಿರಲಿಕ್ಕಿಲ್ಲ. ಶರಣ ರೂಪದ ವ್ಯಾಪಾರಿಗಳೇ ಇರಬೇಕು. ಇವರು ಶರಣರಿಗೆ ಕೊಡಬೇಕು. ಆದರೆ ಕಡಬಡ್ಡಿಗಲ್ಲ. ಮರಳಿ ಬಂದರೂ ಸರಿ; ಬಾರದಿದ್ದರೆ ಇನ್ನೂ ಸರಿ ಎಂಬುದು ಬಸವಣ್ಣನ ವಾದ. ಬಸವಣ್ಣನ ವಾದದ ಪ್ರಕಾರ ಅದು ಅವರಲ್ಲಿದ್ದರೂ(ಶರಣರು) ಇವರಲ್ಲಿದ್ದರೂ(ಕೊಟ್ಟವರು) ಅದು ಲಿಂಗಕ್ಕೆ ಸಲ್ಲುತ್ತದೆ. ಲಿಂಗಕ್ಕೆ ಸಲ್ಲುವುದರಿಂದ ದುಃಖವಿಲ್ಲ.

ಇಲ್ಲಿ ಏಳುವ ಪ್ರಶ್ನೆಯೆಂದರೆ, ಕಾಯಕ ಜೀವಿಗಳಾದ ಶರಣರು ದುಡಿದು ಸಂಪಾದಿಸಿ ತಾವೂ ಬದುಕಿ, ದಾಸೋಹದ ಮೂಲಕ ಇತರರನ್ನು ಬದುಕಿಸುವ ಗುಣವಿರುವವರು. ಇವರು ಯಾಕೆ ಕಡಬಡ್ಡಿಯನ್ನು ಬಯಸುತ್ತಾರೆ? ಬಸವಣ್ಣ ಯಾಕೆ ಸೂಚಿಸುತ್ತಾನೆ? ಇಲ್ಲಿ 'ಹಡದೊಡವೆ ವಸ್ತುವನು' ಸಂಗ್ರಹಿಸಿರುವವರು ಜಂಗಮ ಸೇವೆಗೆ ನೀಡಲಿ ಎಂದು ಬಸವಣ್ಣನ ವಾದವಿರಬೇಕು. 'ಹೊನ್ನಿನೊಳಗೊಂದೊರೆಯ ಸೀರೆಯೊಳಗೊಂದೆಳೆಯ ಇಂದಿಂಗೆ ನಾಳಿಂಗೆ ಬೇಕೆಂದೆನಾದರೆ ನಿಮ್ಮಾಣೆ' ಎಂಬ ಮಾತು ಬಸವಣ್ಣನದೇ. ಶಿವನಶರಣರಿಗೂ ಈ ಮಾತು ಅನ್ವಯವಾಗಬೇಕು. ಆದರೆ ಈ ವಚನ ಬೇರೇನೋ ಸಂಗತಿಯನ್ನು ತಿಳಿಸುತ್ತಿದೆ.

* ನಿರ್ವಚನ : ಚಂದ್ರಶೇಖರ ವಸ್ತ್ರದ(ಸಂ), ೧೯೯೯, ವೀರಶೈವ ಅಧ್ಯಯನ ಸಂಸ್ಥೆ, ಗದಗ.

**ಕಾಷ್ಟವ ಸುವರ್ಣವ ಮಾಡಿದೆನೆಂಬ ಘಾತುಕತನವೆ ನಿಮ್ಮ ಭಕ್ತಿ?**
**ಸಕಲ ದೇಶ ಕೋಶ ವಾಸ ಭಂಡಾರ ಸವಾಲಕ್ಷ ಮುಂತಾದ ಸಂಬಂಧ**
**ಸ್ತ್ರೀಯರ ಬಿಟ್ಟು ಬಂದೆವೆಂಬ ಕೈಕೂಲಿಯೆ ನಿಮ್ಮ ಭಕ್ತಿ**

# ಕಲ್ಪಿತ, ಕಾಮಿತ ಮತ್ತು ಭಾವಿತವಲ್ಲದ ಸತ್ಯ

**ಪ್ರೊ. ಓ.ಎಲ್. ನಾಗಭೂಷಣಸ್ವಾಮಿ**
*ನಂ. ೯೯೯, ೫ನೆ ಮುಖ್ಯರಸ್ತೆ*
*ಅರವಿಂದ ನಗರ, ಮೈಸೂರು ೫೭೦ ೦೨೩*
*ಮೊ: ೯೪೮೦೩ ೭೯೮೩೭*

ಸತ್ಯವೆಂಬುದೇನು? ಸತ್ಯವನ್ನು ಅರಿಯುವುದು ಹೇಗೆ? ಇವು ನಮ್ಮೆಲ್ಲರನ್ನೂ ಕಾಡುವ ಪ್ರಶ್ನೆಗಳು. ಈ ಪ್ರಶ್ನೆಗೆ ಉತ್ತರವಾಗಿ ಇದು ಸತ್ಯ ಎಂದು ಹೇಳುವುದು ಒಂದು ದಾರಿ, ಯಾವುದು ಸತ್ಯವಲ್ಲ ಅನ್ನುವುದನ್ನು ವಿವರಿಸುವುದು ಇನ್ನೊಂದು ದಾರಿ. ವಚನಕಾರರು ಬಹಳಮಟ್ಟಿಗೆ ಯಾವುದು ಸತ್ಯವಲ್ಲ ಅನ್ನುವುದನ್ನು ವಿವರಿಸುತ್ತ ಸತ್ಯವು ಏನಿರಬಹುದು ಅನ್ನುವುದನ್ನು ನಮ್ಮ ಅರಿವಿಗೆ ಬಿಡುತ್ತಾರೆ. ಸಾರಾಂಶ ರೂಪದಲ್ಲಿ ಹೇಳುವುದಾದರೆ ಸತ್ಯವು ಕಲ್ಪಿತವಲ್ಲ, ಕಾಮಿತವಲ್ಲ ಮತ್ತು ಭಾವಿತವೂ ಅಲ್ಲ ಅನ್ನುವುದು ಎಲ್ಲ ವಚನಕಾರರ ನಿಲುವು ಇರುವಂತೆ ತೋರುತ್ತದೆ. ಈ ಕುರಿತು ವಚನಕಾರರು ಹೇಳುವ ಬಹಳಷ್ಟು ಸಂಗತಿಗಳು ನಮ್ಮ ಬುದ್ಧಿಗೆ ಅರಿವಾಗಬಹುದು, ಅರ್ಥವಾಯಿತು ಅನ್ನಿಸಬಹುದು. ಆದರೆ ಅನುಭವಕ್ಕೆ ಬರುತ್ತದೆಯೇ ಅನ್ನುವ ಪ್ರಶ್ನೆ ಉಳಿಯುತ್ತದೆ.

ಹೆಸರು, ಗಂಡು, ಹೆಣ್ಣು, ಜಾತಿ, ಮೇಲು, ಕೀಳು, ನಾಚಿಕೆ, ಸೂತಕ, ಗಡಿ, ಸೀಮೆ, ಕಾಲ, ಪುಣ್ಯ, ಪಾಪ, ಸ್ವರ್ಗ, ನರಕ, ಮುಕ್ತಿ, ಪೂಜೆ, ಇಂಥ ಸಾವಿರಾರು ಸಂಗತಿಗಳೆಲ್ಲವೂ ಕಲ್ಪಿತ ಮಾತ್ರವೇ. ಕಲ್ಪಿತವೆಂದರೆ ಸೃಷ್ಟಿಯಲ್ಲಿ ಸಹಜವಾಗಿ ಮೂಡಿ ಇರುವಂಥವಲ್ಲ, ಮನುಷ್ಯ ಮನಸು, ಬುದ್ಧಿಗಳು ಊಹಿಸಿ ಆಕಾರ ಕೊಟ್ಟು, ಹೆಸರಿಟ್ಟ ಸಂಗತಿಗಳು. 'ಕಾಮಿತ ಕಲ್ಪಿತ ಭಾವಿತ ಅರ್ಪಿತ ತಾನಲ್ಲ' ಎಂದು ಚನ್ನಬಸವಣ್ಣನವರು ಶರಣನ ಸ್ವರೂಪವನ್ನು ವರ್ಣಿಸಿದ್ದಾರೆ. (ಸಮಗ್ರ ವಚನ ಸಂಪುಟ ೩. ೪೮೬) 'ಸೌರಾಷ್ಟ್ರ ಸೋಮೇಶ್ವರನಿರುವಾಗ ಮುಕ್ತಿ ಕಾಮಿತವೇಕೆ' ಎಂದು ಆದಯ್ಯ ಕೇಳುತ್ತಾನೆ. (೬.೬೮೦) 'ಅಷ್ಟಮಿ, ನವಮಿ ಎಂಬ ಕಲ್ಪಿತವೇ ಕೋಶರಣಂಗೆ' ಎಂಬುದು ಬಸವಣ್ಣನವರ ಪ್ರಶ್ನೆ (೧.೬೧೯)

**ಕಾಯದ ಲಜ್ಜೆಯ ಕಲ್ಪಿತವ ಕಳೆದು,**
**ಜೀವದ ಲಜ್ಜೆಯ ಮೋಹವನಳಿದು,**
**ಮನದ ಲಜ್ಜೆಯ ನೆನಹ ಸುಟ್ಟು,**
**ಭಾವದ ಕೂಟ ಬತ್ತಲೆಯೆಂದರಿದು,**
**ತವಕದ ಸ್ನೇಹ ವ್ಯವಹಾರಕ್ಕೆ ಹುಗದು.**
**ಕೂಡಲಸಂಗಮದೇವಯ್ಯಾ** (೧.೧೧೪೫)



ಎಂಬ ಬಸವ ವಚನವನ್ನು ಶೂನ್ಯ ಸಂಪಾದನೆಯಲ್ಲಿ ಅಕ್ಕಮಹಾದೇವಿಯವರನ್ನು ಕುರಿತು ಬಸವಣ್ಣನವರು ಹೇಳಿದ ಮಾತು ಎಂಬಂತೆ ಸಂಕಲಿಸಲಾಗಿದೆ. ದೇಹ, ಜೀವ, ಮನಸುಗಳಿಗೆ ಉಂಟಾಗುವ ಲಜ್ಜೆ ಕೇವಲ ಕಲ್ಪಿತ ಅವನ್ನು ಮಹದೇವಿಯಕ್ಕ ಮೀರಿದ್ದರು ಅನ್ನುವ ವರ್ಣನೆಯಾಗಿ ಕಾಣುತ್ತದೆ.

**ಕಾಲಚಕ್ರದಲ್ಲಿ ಹುಟ್ಟಿ, ಕರ್ಮಚಕ್ರದಲ್ಲಿ ಬೆಳೆದು**
**ಕಲ್ಪಿತದಿಂದವೆ ದಿನಂಗಳು ಸವೆವುತ್ತವೆಯಯ್ಯಾ.**
**ತಲೆಯೆರಡರ ಪಕ್ಷಿ ವಿಷ ನಿರ್ವಿಷವ ಮೆಲಿದಂತಾಯಿತ್ತೆನಗಯ್ಯಾ.**
**ಅಂದಂದಿನರಿವು ಅಂದಂದಿನ ಮರವೆಗೆ ಸರಿಯಯ್ಯಾ**

ಎಂಬುದು ಪುರದ ನಾಗಣ್ಣನವರ ವಚನದಲ್ಲಿ (೮.೪) ಬರುವ ಮಾತು.

ಇವು ನೋಡುವುದಕ್ಕೆ, ಕೇಳುವುದಕ್ಕೆ, ಚೆನ್ನಾಗಿ ಕಂಡರೂ ಕಾಲವನ್ನು ಕಲ್ಪಿತವೆಂದು ಅನುಭವಕ್ಕೆ ತಂದುಕೊಳ್ಳುವುದು ಎಷ್ಟು ಕಷ್ಟವಲ್ಲವೇ? ಲಜ್ಜೆಯು ಕಲ್ಪಿತ, ಆದರೆ ಲಜ್ಜೆಯನ್ನು ಕಲಿತವೆಂಬಂತೆ ವ್ಯವಹರಿಸುವುದು ಖಂಡಿತ ಸುಲಭವಲ್ಲ. ದಿನದ ಕೆಲವು ಗಳಿಗೆಗಳು ಕೆಟ್ಟವು, ಮತ್ತೆ ಕೆಲವು ಉತ್ತಮ, ಒಳ್ಳೆಯ ಮುಹೂರ್ತ, ಕೆಟ್ಟ ಮುಹೂರ್ತ ಇವೆಲ್ಲ ನೂರಕ್ಕೆ ನೂರು ಕಲ್ಪಿತವೇ ಸರಿ. ಯಾಕೆಂದರೆ ಕಾಲವೆಂಬುದೇ ಮನುಷ್ಯ ರೂಪಿಸಿಕೊಂಡಿರುವ ಕಲ್ಪನೆ. ವ್ಯವಹಾರಕ್ಕೆ ಅಗತ್ಯ, ಜ್ಞಾನಕ್ಕೆ ಅಗತ್ಯ ಹೀಗೆ ಕಾಲದ ಅಗತ್ಯ ಎಷ್ಟೇ ಇದ್ದರೂ 'ಕಾಲ' ಮಾತ್ರ ಕಲ್ಪಿತವೇ. ಇದನ್ನು ಬುದ್ಧಿ ಒಪ್ಪಿದರೂ ಆಚರಣೆಗೆ ತರುವುದಕ್ಕೆ ಆಗುತ್ತದೆಯೇ?

ಹಾಗೆ ಬುದ್ಧಿ ಒಪ್ಪಿದುದನ್ನು ಆಚರಣೆಯಲ್ಲಿ ನಿಜಮಾಡಿಕೊಳ್ಳಲು ಆಗದಿರುವುದಕ್ಕೆ ಭಾವನೆ ಮುಖ್ಯಕಾರಣವೆಂದು ತೋರುತ್ತದೆ. ಯಾಕೆಂದರೆ ಭಾವ ಎಂಬುದರಲ್ಲಿ ನಮಗೆ ಇಷ್ಟವಾಗುವ, ಇಷ್ಟವಾಗದಿರುವ ಎಂಬ ವಿಂಗಡಣೆ ಇರುತ್ತದೆ. ಬೇಕು–ಬೇಡ, ಒಳಿತ–ಕೆಡುಕು, ಸರಿ–ತಪ್ಪು, ಉತ್ತಮ–ಅಧಮ, ರೂಪ–ಕುರೂಪ, ಇತ್ಯಾದಿಗಳೆಲ್ಲ 'ನಾನು' ಎಂಬ ಕೇಂದ್ರಕ್ಕೆ ಯಾವುದು ಹಿತ ಎಂಬ ಭಾವನೆಯನ್ನು ಆಧರಿಸಿ ರೂಪುಗೊಳ್ಳುವ ವಿರೋಧಗಳೋ ದ್ವಂದ್ವಗಳೋ ಆಗಿರುತ್ತವೆ. ನಮ್ಮ ಭಾವಕ್ಕೆ ತೊಂದರೆ ಮಾಡದಿರುವುದು ಅಥವಾ ಸಂತೋಷ ಕೊಡುವುದೆಲ್ಲ ಸತ್ಯವೆಂದೇನಂಬುವುದಕ್ಕೆ ನಮಗೆ ಇಷ್ಟ, ಆದರೆ, ಭಾವಗಳು ಸದಾ ಬದಲಾಗುತ್ತವೆ. ಸತ್ಯ ಬದಲಾಗುವಂಥದಲ್ಲ. 'ಅರ್ಪಿತ ಅನರ್ಪಿತವೆಂಬ ಉಭಯಕುಳದ ಶಂಕೆವುಳ್ಳನ್ನಕ್ಕ ಅಚ್ಚಸಂಸಾರಿಯೆಂಬೆ/

ಅನರ್ಪಿತವಿಲ್ಲ, ಅಕಲ್ಪಿತವಯ್ಯಾ, ಕೂಡಲಚೆನ್ನಸಂಗಮದೇವಾ' ಎಂಬ ಚನ್ನಬಸವಣ್ಣನವರ ವಚನದ ಭಾಗವನ್ನು ನೋಡಿ (೩.೬೦೫) ದೇವರಿಕೆ ಕೊಡಬಹುದಾದದ್ದು, ಕೊಡಬಾರದ್ದು ಇತ್ಯಾದಿಗಳೆಲ್ಲ ನಮ್ಮ ಭಾವ ಕಲ್ಪನೆಯೇ ಹೊರತು ದೇವರಿಗೆ ಸಲ್ಲದ್ದು ಯಾವುದೂ ಇಲ್ಲ. 'ಕುರುಹಳಿದು ನಿಜವುಳಿದು' ಎಂಬ ಮಾತು ಅಲ್ಲಮಪ್ರಭುಗಳದ್ದು (೨.೧೧೦೮). ಕುರುಹುಗಳು ರೂಪುಗೊಳ್ಳುವುದೇ ವ್ಯತ್ಯಾಸಗಳನ್ನು ಆಧರಿಸಿ, ಭಿನ್ನತೆಯನ್ನು ಆಧರಿಸಿ, ಆ ವ್ಯತ್ಯಾಸ ಭಿನ್ನತೆಗಳೆಲ್ಲವೂ ಕಲ್ಪಿತಗಳು. ದೇವರೆಂಬ ಸತ್ಯವೇನಿದ್ದರೂ ಕುರುಹಗಳು ಅಳಿದು, ವ್ಯತ್ಯಾಸಗಳ ಭಾವ ಇಲ್ಲವಾದಾಗ ಉಳಿಯುವ ನಿಜ ಮಾತ್ರವೇ.

ಭಾವಗಳನ್ನೇ ಬದುಕಿಗೆ ಆಧಾರ ಮಾಡಿಕೊಂಡರೆ ಕಾಮಿತವಾದದ್ದು ಮಾತ್ರ ಮುಖ್ಯವೆನಿಸೀತು. ನಮ್ಮ ಬಯಕೆಗೆ ಹಿತವಾಗುವಂಥದು ಮಾತ್ರ ಸತ್ಯವೆನಿಸೀತು. ಕಾಮನೆ ಹುಟ್ಟುವುದು ಮನಸಿನಲ್ಲಿ. ಆ ಕಾಮನೆಯ ಈಡೇರಿಕೆಯೇ ಸತ್ಯವೆನ್ನುವುದು ಸರಿಯಲ್ಲ.

ಕಾಮಿತ, ಕಲ್ಪಿತ, ಭಾವಿತವಲ್ಲದ ಸತ್ಯದ ಸ್ಥಿತಿಯನ್ನು ಮಾತಿನಲ್ಲಿ ಹೇಳಲಾಗದು. ಉಪಮೆಗೆ ಬಾರದ ವಸ್ತುವ ಭಾವಕ್ಕೆ ತಂದು ನುಡಿವ ನರಕಿಗಳ ಕೂಗಿಡೆ ಕೂಗಿಡೆ ನರಕದಲದ್ದೂದ ಮಾಬನೆ ಎಂದು ಚನ್ನಬಸವಣ್ಣನವರ ವಚನ (೩.೫೭೭) ಕೇಳುತ್ತದೆ! ಆದರೂ ಅಂಥ ಸ್ಥಿತಿಯನ್ನು ವಚನಕಾರರು ಮಾತಿನಲ್ಲಿ ಹಿಡಿದಿಟ್ಟಿರುವ ರೀತಿಯನ್ನು ನೋಡಿ:

**ತೋರಬಾರದ ಘನವ ಹೇಳಲೆಂದೇನಯ್ಯಾ ?**
**ಹೇಳಬಾರದ ಘನವ ತೋರಲೆಂದೇನಯ್ಯಾ ?**
**ಶರಸಂಧಾನದ ಪರಿಯಲ್ಲ ನೋಡಾ !**
**ಗುಹೇಶ್ವರಲಿಂಗವು ಕಲ್ಪಿತವಲ್ಲ ನೋಡಯ್ಯಾ. (೧.೨೫೮)**

ಅದು ಘನವಾದ ಸ್ಥಿತಿ. ಅದನ್ನು ಯಾರಿಗೂ ತೋರಿಸಲಾಗದು. ಯಾರಿಗೂ ಹೇಳಲೂ ಆಗದು. ಅದರ ಸಾಧನೆಯೆಂದರೆ ಗುರಿ ಇಟ್ಟು ಬಾಣವನ್ನು ಬಿಟ್ಟ ಹಾಗಲ್ಲ. ಆದರೂ

**ಕಾಮಿಸದೆ ನೆನೆದಡೆ, ಕಲ್ಪಿತವಿಲ್ಲದ ಪುರುಷ ಬಂದನೆನಗೆ ನೋಡಾ**
**ಕಲ್ಪಿತವಿಲ್ಲದೆ ನೆನೆದಡೆ, ಭಾವಿಸಲಿಲ್ಲದ ಸುಖವು ದೊರಕಿತ್ತು ನೋಡಾ**
**ಗುಹೇಶ್ವರನೆಂಬ ಲಿಂಗವನರಿದ ಬಳಿಕ, ನಾ ಎಂಬುದಿಲ್ಲ ನೋಡಾ (೨.೪೪೪)**

ಎನ್ನುವ ವಚನವೂ ಅಲ್ಲಮನದೇ.

**ಕಾಯವೆನ್ನ ಕಲ್ಪಿತವೆನ್ನ, ಅರಿವೆನ್ನ ಮರಹೆನ್ನ;**
**ಮಾಯಿಕ ನಿರ್ಮಾಯಿಕವೆನ್ನ;**
**ದೇವರೆನ್ನ ಭಕ್ತರೆನ್ನ ಬಯಲೆನ್ನ.**
**ಮುಂದೆ ಊಹಿಸುವುದಕ್ಕೆ ಒಡಲಿಲ್ಲವಾಗಿ ನಿಂದ ನಿಲವು ತಾನೆ, ನಿರಾಳ.**
**ಚಿಕ್ಕಯ್ಯಪ್ರಿಯ ಸಿದ್ಧಲಿಂಗಾ,**
**ಮುಂದೆ ಒಂದೂ ಇಲ್ಲ, ನಿಲ್ಲು ಮಾಣು (೭.೪೫೨)**

ಕಾಯ ಅನ್ನುವುದಿಲ್ಲ, ಕಲ್ಪಿತ ಅನ್ನುವುದಿಲ್ಲ, ಅರಿವು, ಮರೆವು, ಮಾಯೆ, ನಿರ್ಮಾಯೆ ಎಂದೇನೂ ಅನ್ನುವುದಿಲ್ಲ. ಊಹಿಸುವುದಕ್ಕೆ ದೇಹವಿಲ್ಲವಾಗಿನಿಂದ ನಿಲವೇ ಅವನು. ಅಲ್ಲಿಂದ ಮುಂದೆ ಏನೂ ಇಲ್ಲ ಅನ್ನುವುದು ಘಟ್ಟಿವಾಳಯ್ಯನವರ ವಚನ.

ಇಂಥ ಚರ್ಚೆಗಳನ್ನು ನೋಡಿದರೆ ಸತ್ಯ-ಅಸತ್ಯವೆಂಬುದೆಲ್ಲ ಭಾಷೆಯ ಮಾಯಾಜಾಲವೇ ಅನಿಸಿದರೆ ಆಶ್ಚರ್ಯವಿಲ್ಲ.

●



# ಶರಣರು ಸಮಾಜಕ್ಕೆ ಕೊಟ್ಟ ಮಹತ್ವಪೂರ್ಣವಾದ ಕೊಡುಗೆ 'ಕಾಯಕ'

**ಶ್ರೀ ಚಿಕ್ಕೋಳ್ ಈಶ್ವರಪ್ಪ**
*ಹಿರೇಕೋಗಲೂರು-೫೭೭ ೫೫೨*
*ಚನ್ನಗಿರಿ ತಾಲೂಕು, ದಾವಣಗೆರೆ ಜಿಲ್ಲೆ*
*ಮೊ: ೯೪೪೮೭ ೯೨೧೧೧*

ಕನ್ನಡ ನಾಡಿನ ಇತಿಹಾಸದಲ್ಲಿ ಅಲ್ಲದೆ ಭಾರತ ದೇಶದ ಇತಿಹಾಸದಲ್ಲಿ ಹನ್ನೆರಡನೇ ಶತಮಾನ ಮನುಕುಲದ ಉದ್ಧಾರಕ್ಕಾಗಿ ಅಪಾರವಾದ ಕೊಡುಗೆಯನ್ನು ಕೊಟ್ಟ ಶತಮಾನ. ಬಸವಣ್ಣನವರ ನೇತೃತ್ವದಲ್ಲಿ ನೂರಾರು ಶರಣ ಶರಣೆಯರು ಕಲ್ಯಾಣದ ಮಹಾಮನೆ ಎಂಬ ಚಲನಶೀಲವಾದ ವಿಶ್ವವಿದ್ಯಾಲಯದಲ್ಲಿ ಸಂಗಮಗೊಂಡು ಪ್ರತಿದಿನ ಚಿಂತನ ಮಂಥನ ನಡೆಸಿದ ಅವರುಗಳು ಮನುಕುಲದ ಉದ್ಧಾರಕ್ಕಾಗಿ ವಚನಗಳ ಮೂಲಕ ಸರ್ವಕಾಲಕ್ಕೂ ಮಾನ್ಯವಾದ ಅಮೂಲ್ಯವಾದ ಕೊಡಿಗೆಗಳನ್ನು ಕಟ್ಟಿಕೊಟ್ಟಿದ್ದಾರೆ. ಅದರಲ್ಲಿ ಕಾಯಕ ಮತ್ತು ದಾಸೋಹ ತತ್ವಗಳು ಸಮಾಜದ ಆರ್ಥಿಕ ಸಮಾನತೆಗೆ ನಾಂದಿಯಾಗಿವೆ. ಕಾಯಕವು ವ್ಯಕ್ತಿಯ ಶುದ್ಧತೆಯಲ್ಲಿ ಪ್ರಮುಖವಾಗಿದೆ ಶರಣರು ನಮಗೆ ಕೊಟ್ಟ ಕೊಡುಗೆಗಳು ನಡೆ-ನುಡಿ, ನುಡಿ-ನಡೆ, ಶ್ರದ್ಧೆ, ಭಕ್ತಿ, ಸತ್ಯ ಶುದ್ಧತೆ, ಅಂತರಂಗ ಮತ್ತು ಬಹಿರಂಗ ಶುದ್ಧಿ, ಸರ್ವಸಮಾನತೆ, ಪ್ರಾಮಾಣಿಕತೆ, ಗೌರವ ಇವು ಶರಣ ಶರಣೆಯರ ತತ್ವ ಮತ್ತು ಸಿದ್ಧಾಂತವಾಗಿತ್ತು.

'ಕಾಯ' ಎಂದರೆ ಶರೀರ ಕಾಯಕ ಎಂದರೆ ಮಾಡುವ ಕೆಲಸದಲ್ಲಿ ನಮ್ಮ ಶರೀರವನ್ನೂ ಮನಸ್ಸನ್ನೂ ಸಂಪೂರ್ಣವಾಗಿ ತೊಡಗಿಸಿಕೊಂಡು ಶ್ರದ್ಧೆಯಿಂದ ವಂಚನೆಯಿಲ್ಲದೆ ಪರಿಶುದ್ಧತೆಯಿಂದ ಅಧಿಕ ಲಾಭದ ನಿರೀಕ್ಷಿಸದೆ, ನ್ಯಾಯ ನಿಷ್ಠೆ, ಶ್ರದ್ಧೆ, ಭಕ್ತಿ ಪ್ರಾಮಾಣಿಕತೆ, ಗೌರವ ಇರಿಸಿಕೊಂಡು ಕಾಯಕ ಮಾಡಬೇಕೆಂದು ಶರಣ ಶರಣೆಯರು ಕಾಯಕದ ಮಹತ್ವವನ್ನು ತಿಳಿಸಿದ್ದಾರೆ.

**ಕಾಯಕದಲ್ಲಿ ನಿರತನಾದಡೆ**
**ಗುರು ದರ್ಶನವಾದಡೂ ಮರೆಯ ಬೇಕು,**
**ಲಿಂಗ ಪೂಜೆಯಾದಡೂ ಮರೆಯ ಬೇಕು,**
**ಜಂಗಮ ಮುಂದೆ ನಿಂದಿದ್ದಡೂ ಹಂಗು ಹರಿಯ ಬೇಕು,**
**ಕಾಯಕವೆ ಕೈಲಾಸವಾದ ಕಾರಣ,**
**ಅಮರೇಶ್ವರ ಲಿಂಗವಾಯಿತ್ತಾದಡೂ ಕಾಯಕದೊಳಗು.**

ಕಾಯಕ ನಿಷ್ಠ ಶರಣ ಆಯ್ದಕ್ಕಿ ಮಾರಯ್ಯ ತಿಳಿಸಿದ್ದಾರೆ. ಕಾಯಕದಲ್ಲಿ ತೊಡಗಿಸಿ

ಕೊಂಡಿದ್ದಾಗ ಗುರುಗಳ ದರ್ಶನವನ್ನೂ ಮರೆಯಬೇಕು ಲಿಂಗ ಪೂಜೆಯನ್ನೂ ಮರೆಯಬೇಕು, ಜಂಗಮ ಮುಂದೆ ಬಂದು ನಿಂತಿದ್ದರೆ ಅವರ ಹಂಗನ್ನೂ ತೊರೆಯಬೇಕು ನಾವು ಮಾಡುವ ಕಾಯಕದಲ್ಲಿ ಅಚಲವಾದ ಶ್ರದ್ಧೆ, ನಿಷ್ಠೆ, ಸತ್ಯತೆಯಿಂದ ಮಾಡಬೇಕು ಮಾಡುವ ಕಾಯಕವನ್ನು ಪೂಜೆಗಿಂತಲೂ ಮಿಗಿಲೆಂದು ತಿಳಿದಿರಬೇಕು. ಇಂತಹ ಪವಿತ್ರವಾದ ಕಾಯಕವನ್ನು ಶರಣರು ಕೈಲಾಸವೆಂದು ಕರೆದಿದ್ದಾರೆ, ಕಾಯಕದಿಂದ ಬಂದ ಸಂಪಾದನೆಯನ್ನು ಸ್ವಾರ್ಥಕ್ಕಾಗಿ ಬಳಸದೆ ಸಮಾಜದ ಹಿತಕ್ಕಾಗಿ ದಾಸೋಹಮಾಡುವುದು ಸಾರ್ಥಕವಾದುದೆಂದು ಹೇಳಿದ್ದಾರೆ. ಕಾಯಕ ಎಷ್ಟು ಮುಖ್ಯವೋ ದಾಸೋಹವೂ ಅಷ್ಟೇಮುಖ್ಯವೆಂದು ಹೇಳಿದ್ದಾರೆ.

ಹಾಗದ ಕಾಯಕವ ಮಾಡಿ ಹಣವಡ್ಡವ ತಾ ಎಂಬಲ್ಲಿ ಸತ್ಯದ ಕಾಯಕ ಉಂಟೆ? ಕಡಿಮೆ ಕಾಯಕ ಮಾಡಿ ಹೆಚ್ಚು ಹಣ ಪಡೆಯುವುದು ನ್ಯಾಯವೆ? ಎಂದು ಪ್ರಶ್ನೆ ಮಾಡಿರುವ ಆಯ್ದಕ್ಕಿ ಮಾರಯ್ಯನವರು ಇಂತಹ ಸಂಪಾದನೆ ಅಮರೇಶ್ವರ ಲಿಂಗಕ್ಕೆ ಸಲ್ಲದೆಂದು ಕೆಲಸಕ್ಕೆ ತಕ್ಕ ಸಂಭಾವನೆ ಪಡೆಯಬೇಕು ಸತ್ಯ ಶುದ್ಧವಾದ ಕಾಯಕದಿಂದ ಬಂದ ಹಣ ಮಾತ್ರ ಅಮರೇಶ್ವರ ಲಿಂಗಕ್ಕೆ ಪ್ರಿಯವಾದುದೆಂದು ಆಯ್ದಕ್ಕಿ ಮಾರಯ್ಯ ತಿಳಿಸಿದ್ದಾರೆ,

ಬಸವಾದಿ ಶರಣ ಶರಣೆಯರು ಪರಿಪೂರ್ಣ ಮಾನವೀಯತೆ ಹೊಂದಿದ್ದರಿಂದ ಅವರುಗಳು ಮಾನವತ್ವದಿಂದ ದೈವತ್ವಕ್ಕೆ ಏರಿದ್ದರು. ಶರಣರಿಗೆ ಕಾಯಕ ಅತ್ಯಂತ ಶ್ರೇಷ್ಠವಾದುದರಿಂದ ಅವರ ದೃಷ್ಟಿಯಲ್ಲಿ ಕಾಯಕದಲ್ಲಿ ಮೇಲು ಕೀಳೆಂಬುದು ಇರಲಿಲ್ಲ. ಕಾಯಕದ ಬಗ್ಗೆ ಮೇಲು-ಕೀಳು ಭಾವನೆಯಾಗಲಿ, ಯಾವುದೇ ಸಂಕುಚಿತವಾದ ಭಾವನೆಯಾಗಲಿ ಇರಲಿಲ್ಲ, ರಾಜನ ಆಳ್ವಿಕೆ ಮತ್ತು ರಸ್ತೆಯಲ್ಲಿ ಕುಳಿತು ಚಪ್ಪಲಿ ರಿಪೇರಿಮಾಡುವ ಮೋಚಿಗನ ಕೆಲಸವನ್ನು ಸಮಾನವಾಗಿ ಪರಿಗಣಿಸಿದ್ದರು, ಮಾಡುವ ಕಾಯಕದಲ್ಲಿ ಪರಿಪೂರ್ಣವಾಗಿ ಮನಸ್ಸನ್ನು ತೊಡಗಿಸಿ ಅಂತರಂಗ ಶುದ್ಧಿ ಮತ್ತು ಬಹಿರಂಗ ಶುದ್ಧಿಯಿಂದ ಮಾಡುವ ಕೆಲಸದಲ್ಲಿಯೇ ಶರಣರು ಕೈಲಾಸವನ್ನು ಕಂಡು ಕೊಂಡವರು.

**ಸತ್ಯ ಶುದ್ಧ ಕಾಯಕವ ಮಾಡಿತಂದು**
**ವಂಚನೆ ಯಿಲ್ಲದೆ ಪ್ರಪಂಚಳಿದು**
**ನಿಚ್ಚ ಜಂಗಮಕ್ಕೆ ದಾಸೋಹವ ಮಾಡುವ**
**ಸದ್ಭಕ್ತನ ಹೃದಯದೊಳಗೆ ಅಚೊತ್ತಿದಂತಿಪ್ಪ**
**ಕಾಮ ಧೂಮ ಧೂಳೇಶ್ವರ.**

ಮಾದಾರ ಧೂಳಯ್ಯ ಯಾವುದೇ ಮೋಸ ವಂಚನೆಯಿಲ್ಲದೆ ಸತ್ಯಶುದ್ಧವಾದ ಕಾಯಕದಿಂದ ಗಳಿಸಿದ ದ್ರವ್ಯವನ್ನು ಪ್ರತಿದಿನ ಜಂಗಮರಿಗಾಗಿ ಪ್ರಸಾದ ಸೇವೆ ಮಾಡುವ ಸದ್ಭಕ್ತನ ಹೃದಯದಲ್ಲಿ ಕಾಮಧೂಳೇಶ್ವರ ದೇವನು ಶಾಶ್ವತವಾಗಿ ನೆಲೆಸಿರುವನೆಂದು ಹೇಳಿದ್ದಾರೆ.

ಪ್ರತಿಯೊಬ್ಬರೂ ದುಡಿಮೆ ಮಾಡಲೇಬೇಕು ದುಡಿಮೆಯನ್ನು ಶರಣರು ಕಾಯಕವೇ ಕೈಲಾಸವೆಂದು ಕರೆದಿದ್ದಾರೆ. ಕಾಯಕದಿಂದ ಗಳಿಸಿದ ದ್ರವ್ಯವನ್ನು ಸ್ವಾರ್ಥಕ್ಕಾಗಿ ಬಳಸದೆ ಪರರ ಹಿತಕ್ಕಾಗಿ ಬಳಸಬೇಕೆಂದು ಹೇಳಿದ್ದಾರೆ ಕಾಯಕದ ಪ್ರಾಮುಖ್ಯತೆಯನ್ನು ಕುರಿತು ಶಿವಶರಣ ನುಲಿಯ ಚಂದಯ್ಯ ತನ್ನ ವಚನದಲ್ಲಿ ಸ್ಪಷ್ಟಪಡಿಸಿದ್ದಾರೆ.



**ಗುರುವಾದಡೂ ಕಾಯಕದಿಂದವೆ ಜೀವನ್ಮುಕ್ತಿ**
**ಲಿಂಗವಾದಡೂ ಕಾಯಕದಿಂದವೆ ವೇಶದ ಪಾಶ ಹರಿವುದು**
**ಗುರುವಾದಡೂ ಚರಸೇವೆಯ ಮಾಡಬೇಕು**
**ಜಂಗಮವಾದಡೂ ಚರಸೇವೆಯ ಮಾಡಬೇಕು.**
**ಚನ್ನ ಬಸವಣ್ಣ ಪ್ರಿಯ ಚಂದೇಶ್ವರ ಲಿಂಗದ ಅರಿವು.**

ಗುರುವೇ ಆಗಿರಲಿ, ಲಿಂಗವೇ ಆಗಿರಲಿ ಜಂಗಮವೇ ಆಗಿರಲಿ, ಭಗವಂತನೇ ಆಗಿರಲಿ ತಮ್ಮ ತಮ್ಮ ಜೀವನ ನಿರ್ವಹಣೆಗಾಗಿ ಸತ್ಯ ಶುದ್ಧವಾದ ಕೆಲಸವನ್ನು ಮಾಡಲೇ ಬೇಕು, ಆ ಕೆಲಸವನ್ನು ಶರಣರು ಕಾಯಕವೆಂದು ಕರೆದಿದ್ದಾರೆ, ಕಾಯಕ ಮಾಡುವವನ ಅಂತರಂಗ ಮತ್ತು ಬಹಿರಂಗ ಶುದ್ಧವಾಗಿರಬೇಕಲ್ಲದೆ ನಡೆ ನುಡಿಯೂ ಶುದ್ಧವಾಗಿ ಅಂದರೆ ಒಂದೇ ರೀತಿಯಾಗಿರಬೇಕು ಇದಕ್ಕೆ ಬಸವಣ್ಣನವರ ಸಪ್ತ ಶೀಲಗಳನ್ನು ಪರಿಪಾಲಿಸಿದರೆ ಆದೇವರೂ ಕೂಡ ಮೆಚ್ಚುತ್ತಾನೆ ಎಂದಿದ್ದಾರೆ,

**ಅಟ್ಟೆಯ ಚುಚ್ಚುವ ಉಳಿಯ ಮೊನೆಯಲ್ಲಿ**
**ಪ್ರತ್ಯಕ್ಷವಾದ ಪರಮೇಶ್ವರನ ಕಂಡು**
**ಇತ್ತಲೇಕಯ್ಯಾ, ಕಾಯದ ತಿತ್ತಿಯ ಹೊತ್ತಾಡುವನ ಮುಂದೆ?**
**ನಿನ್ನ ಭಕ್ತರ ಠಾವಿನಲ್ಲಿಗೆ ಹೋಗಿ ಮುಕ್ತಿಯ ಮಾಡು,**
**ನೀಹೊತ್ತ ಬಹುರೂಪದಿ ತಪ್ಪದೆ**
**ರಜತ ಬೆಟ್ಟದ ಮೇಲಕ್ಕೆ ಹೋಗು**
**ನಿನ್ನ ಭಕ್ತರ ಮುಕ್ತಿಯಮಾಡು**
**ಕಾಮ ಧೂಮ ಧೂಳೇಶ್ವರನ ಕರುಣದಿಂದ ನೀನೆ ಬದುಕು**

ಕಾಯಕ ನಿರತ ಶರಣ ಮಾದಾರ ಧೂಳಯ್ಯ ಬೀದಿಯಲ್ಲಿ ಕುಳಿತು ಕೊಂಡು ಚಪ್ಪಲಿಯ ಅಟ್ಟೆಯನ್ನು ಹೊಲಿಯುವ ಸಂದರ್ಭದಲ್ಲಿ ಪರಮಾತ್ಮ ಬಂದು ಎದುರಿಗೆ ನಿಂತಿರುವಾಗ ಮಾದಾರ ಧೂಳಯ್ಯ ನೋಡಿದ್ದರೂ ನೋಡದವನಂತೆ ತನ್ನ ಕರ್ತವ್ಯದಲ್ಲಿ ನಿರತನಾದಾಗ ಪರಮಾತ್ಮನು ಅಟ್ಟೆಯ ಚುಚ್ಚುವ ಉಳಿಯ ಮೊನೆಯಲ್ಲಿ ಕಾಣಿಕೊಳ್ಳುತ್ತಾನೆ ಆಗ ಧೂಳಯ್ಯ ಪರಮಾತ್ಮನೊಂದಿಗೆ ಮಾತನಾಡುತ್ತ ನಿನ್ನ ಭಕ್ತರು ರಜತಬೆಟ್ಟದ ಮೇಲಿದ್ದಾರೆ ಅವರಿಗೆ ಹೋಗಿ ಮುಕ್ತಿಯ ಕೊಡು ಕಾಯಕಕ್ಕಾಗಿ ಚಿಕ್ಕದಾದ ಚರ್ಮದ ಚೀಲವನ್ನು ಹೊತ್ತುಕೊಂಡು ಕಾಯಕಕ್ಕಾಗಿ ಸುತ್ತಾಡುವನ ಬಳಿಗೆ ಏಕಯ್ಯಾ ಬಂದೆ? ನನ್ನ ಕಾಯಕಕ್ಕೆ ಭಂಗ ಉಂಟುಮಾಡ ಬೇಡ ಎಂದು ಮಾದಾರ ಧೂಳಯ್ಯ ಪರಮಾತ್ಮನಿಗೆ ಹೇಳಿದ್ದಾನೆ ಇದರಿಂದ ನಾವು ಕಾಯಕದ ಮಹತ್ವವನ್ನು ತಿಳಿಯ ಬಹುದಾಗಿದೆ.

**ಆವ ಕಾಯಕವಾದಡೂ ಸ್ವಕಾಯಕವ ಮಾಡಿ**
**ಗುರುಲಿಂಗ ಜಂಗಮದ ಮುಂದಿಟ್ಟು**
**ಒಕ್ಕುದ ಹಾರೈಸಿ ಮಿಕ್ಕುದ ಕೈಕೊಂಡು**
**ವ್ಯಾಧಿ ಬಂದಡೆ ನರಳು ಬೇನೆ ಬಂದಡೆ ಒರಲು**
**ಜೀವಹೋದಡೆ ಸಾಯಿ ಇದಕ್ಕಾ ದೇವರ ಹಂಗೇಕೆ**
**ಭಾಪು ಲದ್ದೆಯ ಸೋಮಾ?**

ಲದ್ದೆಯ ಸೋಮಣ್ಣನ ಪತ್ನಿಯು ಖಾಯಿಲೆಯಿಂದ ನರಳುತ್ತಿದ್ದು ನನಗೆ ಬಂದಿರುವ ಖಾಯಿಲೆಯನ್ನು ವಾಸಿಮಾಡುವಂತೆ ದೇವರಲ್ಲಿ ಬೇಡಿಕೊಳ್ಳಿ ಎಂದು ಹೇಳಿದಾಗ ಸೋಮಣ್ಣನು ಕಾಯಕ ಯಾವುದೇ ಆಗಿರಲಿ ಅದನ್ನು ಸ್ವತಃ ಮಾಡಬೇಕು. ಕಾಯಕದಿಂದ ಬಂದ ಹಣದಿಂದ ಗುರು ಲಿಂಗ ಜಂಗಮರ ಸೇವೆಗೆ ಬಳಸಬೇಕು ಉಳಿದುದನ್ನು ನಾವು ಉಪಯೋಗಿಸಬೇಕು. ರೋಗ ರುಜಿನಗಳು ಬಂದರೆ ಅನುಭವಿಸಬೇಕು ಜೀವ ಹೋದರೆ ಸಾಯಬೇಕು ಇದಕ್ಕಾಗಿ ದೇವರನ್ನು ಬೇಡುವುದು ಶಿವಶರಣರಿಗೆ ಸಲ್ಲದೆಂದು ಹೇಳುತ್ತಾನೆ.

ಬಸವಾದಿ ಶಿವ ಶರಣರು ಹನ್ನೆರಡನೇ ಶತಮಾನದಲ್ಲಿ ಮಹಿಳೆಯರಿಗೆ ಅನುಭವ ಮಂಟಪದಲ್ಲಿ ಸಮಾನ ಅವಕಾಶ ಒದಗಿಸಿಕೊಟ್ಟ ಪರಿಣಾಮವಾಗಿ ಏಕಕಾಲದಲ್ಲಿ ೩೩. ಮಹಿಳೆಯರು ಅನುಭವ ಮಂಟಪದಲ್ಲಿ ಲಿಂಗ ಭೇದ, ವಯೋ ಭೇದ ವಿಲ್ಲದೆ, ಜಾತಿ, ವರ್ಗ, ವರ್ಣ ಭೇದವಿಲ್ಲದೆ ಪುರುಷರ ಜೊತೆಯಲ್ಲಿ ಕುಳಿತು ಚಿಂತನ ಮಂಥನದ ಚರ್ಚೆಯಲ್ಲಿ ಭಾಗವಹಿಸಿ ಸುಸಂಸ್ಕೃತರಾಗಿ ತಾವು ವಚನಗಳನ್ನೂ ಸಹ ರಚಿಸಿದ್ದಾರೆ,

ಅಕ್ಕಮಹಾದೇವಿ, ಅಕ್ಕನಾಗಮ್ಮ, ಗಂಗಾಂಬಿಕೆ, ನೀಲಾಂಬಿಕೆ, ಉರಿಲಿಂಗ ಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆ, ಆಯ್ದಕ್ಕಿ ಲಕ್ಕಮ್ಮ, ಹಡಪದ ಲಿಂಗಮ್ಮ, ಸೂಳೆ ಸಂಕವ್ವೆ, ಸತ್ಯಕ್ಕ, ಮೋಳಿಗೆ ಮಹಾದೇವಿ, ಬಡಿಗೇರ ಕಾಳವ್ವೆ, ಕದಿರ ರೆಮ್ಮವ್ವೆ, ಗುಡ್ಡವ್ವೆ, ದೋಸೆ ಪಿಟ್ಟವ್ವೆ, ಕೊಟ್ಟಣದ ಸೋಮವ್ವ, ಗೊಗ್ಗವ್ವೆ, ಕೇತಲಾದೇವಿ, ಇನ್ನೂ ಮುಂತಾದವರಿಗೆ ಬಸವಾದಿ ಶರಣರು ಉತ್ತಮ ಸಂಸ್ಕಾರ ನೀಡಿ, ಅಕ್ಷರ ಜ್ಞಾನವನ್ನಿತ್ತು ಇಷ್ಟಲಿಂಗ ದೀಕ್ಷೆ ನೀಡಿದರು, ಇವರಲ್ಲಿ ಕೆಲವರು ತಮ್ಮ ಗಂಡಂದಿರು ಮಾಡುವ ಕಾಯಕದಲ್ಲಿ ಭಾಗಿಗಳಾಗಿ ದುಡಿಯುವುದರ ಜೊತೆಗೆ ತಾವು ಉಪ ವೃತ್ತಿಗಳನ್ನೂ ಮಾಡುತ್ತಿದ್ದರು, ಕೆಲವರು ತಾವೇ ಸ್ವತಂತ್ರವಾಗಿ (ಕೆಲಸ) ಕಾಯಕವನ್ನು ನಿರ್ವಹಿಸುತ್ತಿದ್ದರು, ಕಾಯಕ ಕೈಲಾಸವೆಂಬುದು ಶರಣ ಶರಣೆಯರ ಜೀವನ ವಿಧಾನವಾಗಿತ್ತು, ಅದು ಸುಖೀಸಮಾಜಕ್ಕೆ ಒಂದು ಸೋಪಾನವೂ ಆಗಿತ್ತು, ಶರಣ ಶರಣೆಯರ ಕಾಯಕದ ಪರಿಕಲ್ಪನೆಯು ಸುಧಾರಣೆಗೊಂಡ ಆರ್ಥಿಕ ಪ್ರಪಂಚಕ್ಕೆ ದೊಡ್ಡ ಕೊಡುಗೆಯಾಗಿದೆ, ಇಂದು ಲೋಕದಲ್ಲಿ ಎಲ್ಲಿ ನೋಡಿದರು ಸಂಕುಚಿತತೆ, ಸ್ವಾರ್ಥಪರತೆಯಿಂದ ತುಂಬಿ ತುಳುಕುತ್ತಿರುವುದರಿಂದ ಅನಾರೋಗ್ಯ ಸಮಾಜದ ಹುಟ್ಟಿಗೆ ಕಾರಣವಾಗಿದೆ, ಪ್ರಸ್ತುತ ದಿನ ಮಾನಗಳಲ್ಲಿ ಶರಣ ಶರಣೆಯರ ಕಾಯಕ ತತ್ವವು ನಿಜಕ್ಕೂ ನಮಗೆ ವರದಾನವಾಗಿದೆ ಎಂದು ಹೇಳಬಹುದು, ಮಹಿಳೆ ಗೃಹ ನಿರ್ವಹಣೆಯಲ್ಲಿ ಸಮರ್ಥಳಾಗಿದ್ದು ಆರೋಗ್ಯ ಪೂರ್ಣವಾದ ಸ್ವಸ್ಥ ಸಮಾಜ ನಿರ್ಮಾಣದಲ್ಲಿ ಸಮರ್ಥಳಾಗಿದ್ದು ನಮಗೆ ಆದರ್ಶಳಾಗಬಲ್ಲಳು, ಪುರುಷನಾಗಲೀ, ಸ್ತ್ರೀಯಾಗಲೀ ಕಾಯಕ ಮಾಡಲೇಬೇಕು, ಕಾಯಕದಿಂದ ಜೀವನ್ಮುಕ್ತಿ ಎಂಬುದು ಶರಣ ಶರಣೆಯರ ತತ್ವವಾಗಿತ್ತು,

ಕೃತ್ಯ ಕಾಯಕ ವಿಲ್ಲದವರು ಭಕ್ತರಲ್ಲ,
ಸತ್ಯ ಶುದ್ಧ ವಿಲ್ಲದುದು ಕಾಯಕವಲ್ಲ,
ಆಸೆ ಯೆಂಬುದು ಭವದ ಬೀಜ:
ನಿರಾಸೆಯೆಂಬುದು ನಿತ್ಯ ಮುಕ್ತಿ;
ಉರಿಲಿಂಗ ಪೆದ್ದಿಗಳರಸನಲ್ಲಿ ಸದರವಲ್ಲ ಕಾಣವ್ವಾ,



ಮಾಡುವ ಕಾಯಕ ಸತ್ಯ ಶುದ್ಧ ವಾಗಿರ ಬೇಕು, ಕೃತ್ಯ ಕಾಯಕವನ್ನು ಮಾಡದವರು ಶಿವಭಕ್ತರಲ್ಲ, ಲೋಕದ ಸಂಸಾರಿಗಳಿಗೆ ಆಸೆ ಸಹಜವಾದುದು ಅತಿಯಾದ ಆಸೆ ದುರಾಸೆಗೆ ಕಾರಣವಾಗುತ್ತದೆ. ಇದರಿಂದ ಸಂಕಷ್ಟಗಳು ಸಂಭವಿಸುತ್ತವೆ, ನಿರಾಸೆ ಯುಳ್ಳವರು ಇತಿಮಿತಿಯ ಆಸೆ ಹೊಂದಿದವರು ಯಾವಾಗಲೂ ಸುಖಿಗಳಾಗಿರುತ್ತಾರೆ ಎಂದು ಕಾಯಕ ನಿರತ ಶರಣೆ ಉರಿಲಿಂಗ ಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆ ತಿಳಿಸಿದ್ದಾಳೆ,

**ಲಂಚ ವಂಚನಕ್ಕೆ ಕೈಯಾನದ ಭಾಷೆ, ಬಟ್ಟೆಯಲ್ಲಿ ಹೊನ್ನು ವಸ್ತ್ರ ಬಿದ್ದಿದ್ದರೆ**
**ನಾನು ಕೈಮುಟ್ಟಿ ಎತ್ತಿದೆನಾದರೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ**
**ಅದೇನು ಕಾರಣ ವೆಂದರೆ, ನೀವಿಕ್ಕಿದ ಭಿಕ್ಷೆದಲ್ಲಿಪ್ಪೆನಾಗಿ**
**ಇಂತಲ್ಲದೆ ನಾನು ಅಳಿಮನವ ಮಾಡಿ ಪರದ್ರವ್ಯಕ್ಕೆ ಆಸೆ ಮಾಡಿದೆನಾದರೆ**
**ನೀನಾಗಲೇ ಎನ್ನ ನರಕದಲ್ಲಿ ಅದ್ದಿ**
**ನೀನೆದ್ದು ಹೋಗಾ ಶಂಭುಜಕ್ಕೇಶ್ವರಾ.**

ಶಿಕಾರಿಪುರ ತಾಲ್ಲುಕು ಹಿರೇಜಂಬೂರಿನ ಶರಣೆ ಸತ್ಯಕ್ಕನ ಕಾಯಕ ಪ್ರತಿದಿನ ಶರಣರ ಮನೆಯ ಅಂಗಳದಲ್ಲಿನ ಕಸವನ್ನು ಗುಡಿಸಿ ಸ್ವಚ್ಚ ಮಾಡುವುದು, ತಾನು ಮಾಡುವ ಕಾಯಕದಲ್ಲಿ ಪರಿಶುದ್ಧತೆಯನ್ನು ಕಾಪಾಡಿಕೊಂಡು ಬಂದ ಆಕೆ ತಾನು ಯಾವುದೇ ಲಂಚ ಮತ್ತು ವಂಚನೆಗೆ ಕೈ ಒಡ್ಡುವುದಿಲ್ಲ ಎಂದು ಭಾಷೆ ಕೊಡುವುದಲ್ಲದೆ ರಸ್ತೆಯಲ್ಲಿ ಹೊನ್ನು ವಸ್ತ್ರ ಇತ್ಯಾದಿ ಯಾವುದೇ ವಸ್ತುಗಳು ಬಿದ್ದಿದ್ದರೆ ಕಣ್ಣಿನಿಂದ ನೋಡುವುದಿಲ್ಲ ಕೈಯಿಂದಲೂ ಮುಟ್ಟದೆ ಕಾಲಿನಿಂದ ಮುಚ್ಚಿ ಮುಂದೆ ಹೋಗುವುದಾಗಿ ತನ್ನ ಇಷ್ಟದೈವ ಶಂಭುಜಕ್ಕೇಶ್ವರನಲ್ಲಿ ಆಣೆ ಮಾಡಿದ್ದಾಳೆ. ಕಾಯಕಕ್ಕೆ ದೊರೆಯುವ ಹಣವೇ ನನಗೆ ಹಿರಿದಾದುದೆಂದು ಹೇಳಿದ್ದಾಳೆ,

**ಕಾಯಕ ನಿಂದಿತ್ತು ಹೋಗಯ್ಯಾ ಎನ್ನಾಳ್ದನೆ**
**ಭಾವ ಶುದ್ಧವಾಗಿ ಮಹಾ ಶರಣರ**
**ತಿಪ್ಪೆಯ ತಪ್ಪಲಕ್ಕಿಯ ತಂದು**
**ನಿಶ್ಚೈಸಿ ಮಾಡಬೇಕು ಮಾರಯ್ಯಪ್ರಿಯ ಅಮರೇಶ್ವರ ಲಿಂಗಕ್ಕೆ,**
**ಬೇಗ ಹೋಗು ಮಾರಯ್ಯಾ,**

ಎಂದಿನಂತೆ ಮಾರಯ್ಯ ಅಕ್ಕಿಯನ್ನು ಆಯ್ದು ತರುವ ಕಾಯಕಕ್ಕೆ ಹೋಗದೆ ಅನುಭವ ಮಂಟಪದಲ್ಲಿ ನಡೆಯುತ್ತಿದ್ದ ಗಾಢವಾದ ಚಿಂತನ ಮಂಥನದ ಚರ್ಚೆಯಲ್ಲಿ ತಲ್ಲೀನನಾಗಿ ಕುಳಿತಿರಲು ಅತ್ತ ಪತ್ನಿ ಲಕ್ಕಮ್ಮಳು ಕಾಯಕಕ್ಕೆ ವೇಳೆಯಾದರೂ ಸಹ ಪತಿ ಮಾರಯ್ಯ ಅಕ್ಕಿಯನ್ನು ಆಯ್ದು ತರುವ ಕಾಯಕಕ್ಕೆ ಹೋಗುವುದನ್ನು ಮರೆತು ಬಿಟ್ಟರೆ ಎಂದು ಗಾಬರಿಯಿಂದ ಅನುಭವ ಮಂಟಪದ ಬಾಗಿಲಲ್ಲಿ ನಿಂತುಕೊಂಡು ಗೌರವದಿಂದ ಕಾಯಕಕ್ಕೆ ವೇಳೆಯಾಗಿದೆ ಎನ್ನಾಳ್ದನೆ ಬೇಗನೆ ಹೋಗಿ ಎಂದು ಎಚ್ಚರಿಸುತ್ತಾಳೆ ಇದು ಶರಣ ದಂಪತಿಗಳಲ್ಲಿದ್ದ ಕಾಯಕ ನಿಷ್ಠೆಯನ್ನು ತೋರಿಸುತ್ತದೆ,

**ಆಸೆಯೆಂಬುದು ಅರಸಿಂಗಲ್ಲದೆ**
**ಶಿವ ಭಕ್ತರಿಗುಂಟೆ ಅಯ್ಯಾ?**
**ರೋಷವೆಂಬುದು ಯಮದೂತರಿಗಲ್ಲದೆ**

**ಅಜಾತರಿಗುಂಟೆ ಅಯ್ಯಾ?**
**ಈಸಕ್ಕಿಯಾಸೆ ನಿಮಗೇಕೆ? ಈಶ್ವರನೊಪ್ಪ**
**ಮಾರಯ್ಯ ಪ್ರಿಯ ಅಮರೇಶ್ವರ ಲಿಂಗಕ್ಕೆ ದೂರ ಮಾರಯ್ಯ,**
**ಒಮ್ಮನವ ಮೀರಿ ಇಮ್ಮನದಲ್ಲಿ ತಂದಿರಿ**
**ಇದು ನಿಮ್ಮ ಮನವೋ, ಬಸವಣ್ಣನ ಅನುಮಾನದ ಚಿತ್ತವೋ?**
**ಈ ಮಾತು ಮಾರಯ್ಯಪ್ರಿಯ ಅಮರೇಶ್ವರ ಲಿಂಗಕ್ಕೆ ಸಲ್ಲದ ಬೋನ**
**ಅಲ್ಲಿಯೇ ಸುರಿದು ಬನ್ನಿ ಮಾರಯ್ಯಾ**

ಮಾರಯ್ಯ ಅವಸರದಿಂದ ಎಂದಿಗಿಂತ ಹೆಚ್ಚಿನ ಅಕ್ಕಿಯನ್ನು ಆಯ್ದು ತರುತ್ತಾನೆ. ಅದನ್ನು ನೋಡಿದ ಲಕ್ಕಮ್ಮ ಆಸೆ ಉಳ್ಳವರು ಅರಸರು ನಮ್ಮಂತ ಶಿವ ಭಕ್ತರಿಗೇಕೆ ಈ ಆಸೆ ಬಂತು. ನಿಮಗೆ ಈಶ್ವರನು ಒಪ್ಪುವುದಿಲ್ಲ. ಇದರಿಂದ ಮಾಡಿದ ಬೋನವನ್ನು ಅಮರೇಶ್ವರ ಲಿಂಗಯ್ಯನು ಸ್ವೀಕರಿಸುವುದಿಲ್ಲ. ನೀವು ಎಲ್ಲಿಂದ ಆಯ್ದು ತಂದಿರುವಿರೋ ಅಲ್ಲಿಗೆ ಹೋಗಿ ಸುರಿದು ಬನ್ನಿ ಎಂದು ಪತಿ ಮಾರಯ್ಯನಿಗೆ ಜ್ಞಾನೋದಯ ಮಾಡುತ್ತಾಳೆ ಆಯ್ದಕ್ಕಿ ಲಕ್ಕಮ್ಮ. ಇಂದಿನ ನಮ್ಮ ದುರಾಸೆಯುಳ್ಳ ದಂಪತಿಗಳು ಲಕ್ಕಮ್ಮನ ಗುಣವನ್ನು ಪಾಲಿಸಿದರೆ ಭ್ರಷ್ಟಾಚಾರಕ್ಕೆ ಕಡಿವಾಣ ಹಾಕಬಹುದು. ಮನಶುದ್ಧಿಯಿಂದ ಕಾಯಕ ಮಾಡಿದರೆ ದ್ರವ್ಯಕ್ಕೆ ಬಡತನವಿರುವುದಿಲ್ಲ ಎಂದು ಲಕ್ಕಮ್ಮ ಕಾಯಕದ ಮಹಿಮೆಯನ್ನು ಸಾರಿದ್ದಾಳೆ.

**ಹದ ತಪ್ಪಿ ಕುಟ್ಟಲು ನುಚ್ಚಲ್ಲದೆ ಅಕ್ಕಿಯಿಲ್ಲ**
**ವ್ರತ ಹೀನನ ನೆರೆಯೆ ನರಕವಲ್ಲದೆ ಮುಕ್ತಿಯಿಲ್ಲ**
**ಅರಿಯದುದು ಹೋಗಲಿ ಅರಿದು ಬೆರೆದೆನಾದಡೆ**
**ಒಲ್ಲೆ ಬಲ್ಲೆನಾಗಿ, ನಿಮ್ಮಾಣೆ ನಿರ್ಲಜ್ಜೇಶ್ವರಾ**

ಹದವರಿತು ಭತ್ತವನ್ನು ಕುಟ್ಟಿದರೆ ಒಳ್ಳೆಯ ರೀತಿಯ ಅಕ್ಕಿಯನ್ನು ಪಡೆಯುತ್ತೇವೆ, ಹದಮೀರಿ ಭತ್ತವನ್ನು ಕುಟ್ಟಿದರೆ ಬರೀ ನುಚ್ಚಾದ ಅಕ್ಕಿಯನ್ನು ಪಡೆಯುತ್ತೇವೆ. ಅದೇ ರೀತಿಯಾಗಿ ಆಚಾರ ಶೀಲವುಳ್ಳವರ ಸಹವಾಸ ಮಾಡಿದರೆ ಮುಕ್ತಿಯನ್ನು ಪಡೆಯಬಹುದು. ಆಚಾರಹೀನರ ಸಂಗವ ಮಾಡಿದರೆ ನರಕವೇ ಗತಿ ಎಂದು ಶ್ರದ್ಧೆ, ನಿಷ್ಠೆಯಿಂದ ಕಾಯಕ ಮಾಡಬೇಕೆಂದು ಕೊಟ್ಟಣದ ಸೋಮವ್ವ ಎಚ್ಚರಿಸಿದ್ದಾಳೆ.

**ಕೈತಪ್ಪಿ ಕೆತ್ತಲು ಕಾಲಿಗೆ ಮೂಲ**
**ಮಾತು ತಪ್ಪಿ ನುಡಿಯಲು ಬಾಯಿಗೆ ಮೂಲ**
**ವ್ರತಹೀನನ ನೆರೆಯಲು ನರಕಕ್ಕೆ ಮೂಲ**
**ಕರ್ಮಹರ ಕಾಳೇಶ್ವರಾ**

ಬಾಚಿ ಕಾಯಕದ ಬಸವಯ್ಯಗಳ ಪುಣ್ಯಸ್ತ್ರೀ ಕಾಳವ್ವೆ ತನ್ನ ವಚನದಲ್ಲಿ ಕಾಯಕ ಮಾಡುವಾಗ ಏಕಾಗ್ರತೆ ಮನೋನಿಗ್ರಹ, ಶ್ರದ್ಧೆ, ನಿಷ್ಠೆ ಮತ್ತು ಜಾಗರೂಕತೆ ಮುಖ್ಯವಾಗಿರ ಬೇಕೆಂದಿದ್ದಾಳೆ.

**ಹದ ಮಣ್ಣಲ್ಲದೆ ಮಡಕೆಯಾಗಲಾರದು**
**ವ್ರತಹೀನನ ಬೆರೆಯಲಾಗದು**



**ಬೆರೆದಡೆ ನರಕ ತಪ್ಪದು**
**ನಾನೊಲ್ಲೆ ಬಲ್ಲೆನಾಗಿ ಕುಂಭೇಶ್ವರಾ**

ಕುಂಬಾರ ಗುಂಡಯ್ಯಗಳ ಪುಣ್ಯ ಸ್ತ್ರೀ ಕೇತಲಾದೇವಿ ಮಡಕೆ ತಯಾರಿಸಬೇಕಾದರೆ ಆ ಮಣ್ಣನ್ನು ಮೊದಲು ಚೆನ್ನಾಗಿ ಹದಮಾಡಿಕೊಳ್ಳುವ ಬಗ್ಗೆ ಪ್ರಸ್ತುತಪಡಿಸಿದ್ದಾಳೆ.

**ಒತ್ತೆಯ ಹಿಡಿದು ಮತ್ತೊತ್ತೆಯ ಹಿಡಿಯೆ**
**ಹಿಡಿದಡೆ ಬತ್ತಲೆ ನಿಲಿಸಿ ಕೊಲುವರಯ್ಯಾ**
**ವ್ರತ ಹೀನನರಿದು ಬೆರೆದಡೆ**
**ಕಾದ ಕತ್ತಿಯಲ್ಲಿ ಕೈ,ಕಿವಿ, ಮೂಗ ಕೊಯ್ವರಯ್ಯಾ**
**ಒಲ್ಲೆ ನೊಲ್ಲೆ ಬಲ್ಲೆನಾಗಿ ನಿಮ್ಮಾಣೆ ನಿರ್ಲಜ್ಜೇಶ್ವರಾ**

ತಳ ಸಮುದಾಯದ ಅತ್ಯಂತ ಕನಿಷ್ಟ ಎಂದು ತಿಳಿದಿರುವ ಸೂಳೆಗಾರಿಕೆಯನ್ನು ಕೈಗೊಂಡಿದ್ದ ಸೂಳೆ ಸಂಕವ್ವೆಯು ತನ್ನ ಕಾಯಕದ ನಿಷ್ಠೆಯನ್ನು ಈ ವಚನದಲ್ಲಿ ಸ್ಪಷ್ಟಪಡಿಸಿದ್ದಾಳೆ. ಬಸವಾದಿ ಪ್ರಮಥರು ಹನ್ನೆರಡನೇ ಶತಮಾನದಲ್ಲಿ ಪ್ರಥಮವಾಗಿ ಮಹಿಳೆಯರಿಗೆ ಸಾಮಾಜಿಕವಾಗಿ ಸಮಾನ ಸ್ಥಾನಮಾನ ದೊರಕಿಸಿಕೊಟ್ಟ ಫಲವಾಗಿ ಅಕ್ಷರ ಜ್ಞಾನ ಪಡೆದು ವಚನ ರಚನೆ ಮಾಡಿ ಎಲ್ಲಾಕಾಲಕ್ಕೂ ಶರಣೆಯರು ಆದರ್ಶರಾಗಿ ಉಳಿದಿದ್ದಾರೆ.

●

**ಕೈಲಾಸ ಕೈಲಾಸವೆಂದು ಬಡಿದಾಡುವ ಅಣ್ಣಗಳಿರಾ, ಕೇಳಿರಯ್ಯ,**
**ಕೈಲಾಸವೆಂಬುದೊಂದು ಭೂಮಿಯೊಳಗಿರುವ ಹಾಳು ಬೆಟ್ಟ,**
**ಅಲ್ಲಿರುವ ಮುನಿಗಳೆಲ್ಲ ಜೀವಗಳ್ಳರು,**
**ಅಲ್ಲಿರ್ದ ಚಂದ್ರಶೇಖರನು ಬಹು ಎಡ್ಡ.**
**ಇದರಾಡಂಬರವೇಕಯ್ಯಾ?**
**ಎಮ್ಮ ಪುರಾತನರಿಗೆ ಸದಾಚಾರದಿಂದ ವರ್ತಿಸಿ,**
**ಲಿಂಗಾಂಗ ಸಾಮರಸ್ಯವ ತಿಳಿದು,**
**ನಿಮ್ಮ ಪಾದ ಪದ್ಮದೊಳು ಲಯವಾದ ಪದವೆ ಕೈಲಾಸವಯ್ಯ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

## ಒಂದು ವಚನ ~ ಎರಡು ನೋಟ

ಡಾ. ಶೈಲಜ ಅವರು ಪ್ರಸ್ತುತ ಮಾಗಡಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಪ್ರಿನ್ಸಿಪಾಲರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಮೂಲತಃ ಇಂಗ್ಲಿಷ್ ಪ್ರಾಧ್ಯಾಪಕರಾಗಿರುವ ಇವರು ಸಾಹಿತ್ಯದ ಹಲವು ಪ್ರಕಾರಗಳಲ್ಲಿ ಕೃತಿಗಳನ್ನು ರಚಿಸಿದ್ದಾರೆ. ರಂಗಭೂಮಿ ಇವರ ಪ್ರಧಾನ ಆಸಕ್ತಿಯ ಕ್ಷೇತ್ರವಾಗಿದೆ.

ಶ್ರೀಮತಿ ಉದಯಕುಮಾರಿ ಅವರು ಕನ್ನಡ ಸ್ನಾತಕೋತ್ತರ ಪದವೀಧರರು. ಪ್ರಸ್ತುತ ಇವರು ಕಾಲೇಜು ಶಿಕ್ಷಣ ಇಲಾಖೆಯಲ್ಲಿ ಪತ್ರಾಂಕಿತ ವ್ಯವಸ್ಥಾಪಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಸಾಹಿತ್ಯ ಇವರ ಮೊದಲ ಪ್ರೀತಿಯ ಕ್ಷೇತ್ರವಾಗಿದೆ. ಸಾಹಿತ್ಯದ ಗಂಭೀರವಾದ ಓದುಗರಾದ ಇವರು ಇತ್ತೀಚೆಗೆ ವಿಮರ್ಶೆಯಲ್ಲೂ ಹೆಜ್ಜೆ ಇಟ್ಟಿದ್ದಾರೆ.

**ಸಾಕ್ಷಿ ಸತ್ತಿತ್ತು, ಪತ್ರ ಬೆಂದಿತ್ತು, ಲೆಕ್ಕ ತುಂಬಿತ್ತು,**
**ಜೀವ ಜೀವಿತದ ಆಸೆ ನಿಂದುದು, ಭಾಷೆ ಹೋಯಿತ್ತು,**
**ದೇಶವೆಲ್ಲರಿಯೆ ಎನ್ನ ದೇವ ಚೆನ್ನಮಲ್ಲಿಕಾರ್ಜುನನ**
**ನಂಬಿ ಹಂಬಲ ಮರೆದೆನಾಗಿ.**

**ಅಕ್ಕಮಹಾದೇವಿ**

## ಎದುರು ದಿಕ್ಕಿನ ನೋಟ

### ಡಾ. ಶೈಲಜ ಎಸ್.

*ನಂ. ೨೫, ೨ನೆ ಎ ಅಡ್ಡರಸ್ತೆ*
*ವಾರ್ಡ್ ನಂ. ೧೨೮, ನಾಗರಭಾವಿ,*
*ಬೆಂಗಳೂರು ೫೬೦ ೦೭೨*
*೯೮೪೫೭ ೨೧೮೭೭*

"ಸಾಕ್ಷಿ ಸತ್ತಿತ್ತು" ಎಂಬ ಮೊದಲೆರಡು ಪದಗಳಲ್ಲಿ ಅಕ್ಕನಿಗೆ ಲೋಕದ ಬಗೆಗಿರುವ ಸಿಟ್ಟು ವ್ಯಕ್ತವಾಗುತ್ತದೆ. 'ಸತ್ತಿತ್ತು' ಪದ ಇಡೀ ಲೋಕದ ನಿಸ್ಸತ್ವವನ್ನು ಘೋಷಿಸಿದಂತಿದೆ. ಮನಸಾಕ್ಷಿಯೇ ಇಲ್ಲದ ಮನುಷ್ಯರಿಂದ ಕೂಡಿದ ನಶ್ವರತೆಯ ಲೋಕವನ್ನು ಧಿಕ್ಕರಿಸಿದಂತಿದೆ. T.S. EliotgÀ Waste Land ಎಂಬ ದೀರ್ಘ ಕವನದ ಮೊದಲೆರಡು ಸಾಲುಗಳಲ್ಲಿ ಬರುವ 'deadland'ಗೂ 'ಸಾಕ್ಷಿ ಸತ್ತಿತ್ತು' ಎಂದು ಘೋಷಿಸುವ ಇದಕ್ಕೂ ಸಾಮ್ಯತೆ ಇಲ್ಲವೆನಿಸುವುದಿಲ್ಲ.



'ಪತ್ರ ಬೆಂದಿತ್ತು' – ಮನುಷ್ಯ ಮನುಷ್ಯರ ನಡುವಿನ ಸಂವಹನ ಸಂಪರ್ಕ ಪೂರ್ಣವಾಗಿ ಬೆಂದು ಹೋಗಿದೆ. ಮತ್ತೆನ್ನೇನನ್ನೂ ಸಂವಹಿಸಲು ಆಗದಂತೆ ಬೆಂದಾಗಿದೆ. ಕಾಯಿಸಿ, ಕುದಿಸಿ, ಬೇಯಿಸಲಿಕ್ಕೆ ಇನ್ನೇನೂ ಉಳಿದಿಲ್ಲ. 'ಲೆಕ್ಕ ತುಂಬಿತ್ತು' – ಕರ್ಮದ ಲೆಕ್ಕಾಚಾರ ತುಂಬಿ ಬಂದಿತ್ತು. ಈ ಜಗವನ್ನು ತನ್ನ ವಿನೋದಕ್ಕಾಗಿ ಸೃಷ್ಟಿಸಿದ ಸೃಷ್ಟಿಕರ್ತನ ಲೆಕ್ಕಚಾರ ಮುಗಿದಿತ್ತು. ಜೀವಜೀವಗಳ ನಡುವಿನ ಬಾಂಧವ್ಯದ ಬೆಸುಗೆ ಕರಗಿತ್ತು. ಯಾಂತ್ರಿಕತೆಯ ಬಿರುಗಾಳಿಯಲಿ ಮಾನವ ಸಂಬಂಧಗಳು ಕೊಚ್ಚಿಹೋಗಿದ್ದವು. ಅಕ್ಕ ತನ್ನ ಕಾಲಘಟ್ಟದ ಕುರಿತು ಬರೆದಿದ್ದರೂ ಇಂದಿನ ಆಧುನಿಕ ಯಂತ್ರಮಾನವನ ಕೃತಕ ಬದುಕನ್ನು, ಸಂಪರ್ಕ ಸಂವಹನಗಳನ್ನು ಮೀರಿದ, ಒಂದು ರೀತಿಯ ಸ್ವಯಂಪೂರ್ಣತೆಯ ಅಹಂನಲ್ಲಿ ಜೀವಿಸುತ್ತಿರುವ ಮನುಷ್ಯರ ಖಾಲೀತನವನ್ನು ಈ ವಚನ ಬಿಂಬಿಸುತ್ತದೆ.

ಹಾಗಾಗಿ, ಅಕ್ಕನ ಸತಿ–ಪತಿಭಾವ, ಅಂಗ ಲಿಂಗೈಕ್ಯ ಭಾವ ಇವೆಲ್ಲವನ್ನೂ ಸ್ವಲ್ಪ ಮಟ್ಟಿಗೆ ಬದಿಗಿಟ್ಟು ಈ ವಚನವನ್ನು ಓದಬಹುದಾಗಿದೆ. "ಭಾಷೆ ಹೋಯಿತು" – ಈ ನುಡಿಗಟ್ಟನ್ನು ಅಕ್ಕನ ಇತರ ವಚನಗಳಲ್ಲೂ ಕಾಣಬಹುದಾಗಿದೆ.

"ದ್ರವ್ಯಶೀಲ ಧನಶೀಲ ತನುಶೀಲ ಆತ್ಮಶೀಲ ಇಂತಿವರೊಳಗಾದ ನಾನಾ ಶೀಲಂಗಳೆಲ್ಲವೂ ಓಸರಿಸಿದಲ್ಲಿ ಭಾಷೆ ಹೋಯಿತ್ತು". ಭಾಷೆಯನ್ನು ಇಲ್ಲಿ ಬದ್ಧತೆ ಎಂದು ತಿಳಿಯಬಹುದಾಗಿದೆ. ಈ ನೆಲೆಗಟ್ಟಿನಲ್ಲಿ ಪ್ರಸ್ತುತ ವಚನವನ್ನು ಓದಿದಾಗ ಲೋಕದ ಪ್ರತಿಯ ಬದ್ಧತೆ ನಶಿಸಿ ಹೋಗಿದೆ ಎಂದು ಪ್ರತಿಪಾದಿಸಿದಂತಿದೆ. ಹಾಗೂ ಒಬ್ಬರ ಪ್ರತಿ ಇನ್ನೊಬ್ಬರಿಗಿರಬೇಕಾದ ಸಂಭಾವ, ಸಂಬಂಧಗಳ ನಡುವಿನ ಮಧುರತೆ, ಮಾನವನಿಗಿರಬೇಕಾದ ಸಾಮಾಜಿಕ ಬದ್ಧತೆ ಎಲ್ಲವೂ ಸತ್ತು ಹೋಗಿ ಪ್ರೇಮ ಸಂವಹನದ ಪರಿಭಾಷೆಯೇ ಇಲ್ಲವಾಗಿತ್ತು.

ಲೋಕವಿನ್ನೆಲ್ಲಿದೆ? ಲೋಕದ ಅಸ್ತಿತ್ವವಿನ್ನೆಲ್ಲಿದೆ? ಎಂದು ಬೇಸರದಿಂದ ಪ್ರಶ್ನಿಸುತ್ತಾ ಮತ್ತೆ ಚೆನ್ನಮಲ್ಲಿಕಾರ್ಜುನನ ಮೊರೆಹೋಗುವ ಅಕ್ಕನ ಈ ವಚನ ಲೋಕದ ನಿರ್ಲಿಪ್ತತೆ, ಅಲಕ್ಷ್ಯಭಾವ, ಯಾಂತ್ರಿಕತೆಯನ್ನು ಖಂಡಿಸುತ್ತದೆ. ಅರ್ಥಹೀನ ಲೋಕದ ಹಂಬಲ ತೊರೆದು ಚೆನ್ನಮಲ್ಲಿಕಾರ್ಜುನನ್ನೋರ್ವನನ್ನೇ ನಂಬಿರುವೆ ಎಂದು ಮುಕ್ತಾಯಗೊಳಿಸುವ ಅಕ್ಕನ ಅಗಾಧವಾದ ಅಲೌಕಿಕ ವೈಚಾರಿಕತೆ ಒಮ್ಮೊಮ್ಮೆ ಕೈಗೆಟುಕದ ಅಮೂರ್ತತೆ ಎಂದೆನಿಸಿದರೂ ಪದೇ ಪದೇ ಅಮೂರ್ತತೆಯಲ್ಲಿ ವಿಲೀನವಾಗಬಯಸುವ ಅಕ್ಕನ ಪರಿ, ಸಮಸ್ಯೆಗಳಿಗೆ ಪರಿಹಾರವೆನಿಸದೆ ಪಲಾಯನವೇನೋ ಎಂದೆನಿಸಿ ಚೆನ್ನಮಲ್ಲಿಕಾರ್ಜುನ ಎಂಬ ಉದ್ಗಾರ ಅಸಹಾಯಕತೆಯ ಕೂಗಿನಂತೆನಿಸುತ್ತದೆ.

## ಅನುರಕ್ತೆಯ ನಿರೂಪಣೆ

### ಉದಯಕುಮಾರಿ ಎಂ.

*ಪತ್ರಾಂಕಿತ ವ್ಯವಸ್ಥಾಪಕರು*
*ಕಾಲೇಜು ಶಿಕ್ಷಣ ಆಯುಕ್ತರ ಕಛೇರಿ*
*ಕಾಲೇಜು ಮತ್ತು ತಾಂತ್ರಿಕ ಶಿಕ್ಷಣ ಇಲಾಖೆ*
*ಶಿಕ್ಷಣ ಸೌದ, ಶೇಷಾದ್ರಿ ರಸ್ತೆ ಬೆಂಗಳೂರು ೫೬೦೦೦೧*
*೯೮೮೬೩ ೦೬೬೩೪*

ಅಕ್ಕನ ಬದುಕೇ ಒಂದು ಸೋಜಿಗ. ಸುಮಾರು ಎಂಟುನೂರು ವರ್ಷಗಳ ಹಿಂದೆ ಹೆಣ್ಣೊಬ್ಬಳು ಏಕಾಂಗಿಯಾಗಿ ತನ್ನ ಕುಟುಂಬವನ್ನು, ಸುತ್ತಲಿನ ಸಮಾಜವನ್ನು, ಎದುರಿಸಿ

ನಿಂತ ಬಗೆಯೇ ವಿಸ್ಮಯ ಮೂಡಿಸುತ್ತದೆ. ಅಂದಿನ ಸಮಾಜದಲ್ಲಿನ ಒಪ್ಪಿತ ಸಾಮಾಜಿಕ ಮೌಲ್ಯಗಳು, ಸ್ಥಾಪಿತ ಪುರುಷ ಪ್ರಾಬಲ್ಯದ ಕಟ್ಟುಪಾಡುಗಳನ್ನು ಮುರಿದು, ತನ್ನದೇ ಆದ ದಾರಿಯನ್ನು ಕಂಡುಕೊಂಡದ್ದಷ್ಟೇ ಅಲ್ಲದೇ ದಿಟ್ಟತನದಿಂದ ಅದೇ ಮಾರ್ಗದಲ್ಲಿ ಬದುಕಿ ಬಯಲಾದ ಹೆಣ್ಣುಮಗಳೊಬ್ಬಳ ಜೀವನ ಇಂದು ನಮಗೆ ದಂತಕಥೆಯಂತೆ ಗೋಚರಿಸುತ್ತದೆ.

ಒಲ್ಲದ ವಿವಾಹ ಬಂಧನವನ್ನು ಅನಿವಾರ್ಯ ಸಂದರ್ಭದಲ್ಲಿ ಅಪ್ಪಿ, ಬಂಧನಕ್ಕೆ ಬಂದ ಗಿಳಿಯಂತೆ ಸಾಂಸಾರಿಕ ಬದುಕಿನಲ್ಲಿ ತನ್ನನ್ನು ತೊಡಗಿಸಿಕೊಂಡ ಅಕ್ಕ, ಈ ಲೌಕಿಕ ವ್ಯಾಪಾರಗಳಿಂದ ತನ್ನನ್ನು ವಿಮುಕ್ತಗೊಳಿಸಿಕೊಳ್ಳಲು ತನಗೆ ತಾನೇ ಕೆಲವು ಷರತ್ತುಗಳನ್ನು ವಿಧಿಸಿಕೊಳ್ಳುತ್ತಾಳೆ. ಆ ಷರತ್ತುಗಳು ಗಂಡ ಕೌಶಿಕನಿಗೆ ಅಕ್ಕನನ್ನು ಶಾಶ್ವತವಾಗಿ ತನ್ನೊಂದಿಗೆ ಉಳಿಸಿಕೊಳ್ಳುವ ಬೇಲಿಯಂತೆ ಕಂಡರೂ, ಅದೇ ಷರತ್ತುಗಳು ಅಕ್ಕನಿಗೆ ಬಿಡುಗಡೆಯ ಹಾದಿಯ ಬೆಳಕಿಂಡಿಗಳಾಗುತ್ತದೆ.

ಈ ಮೇಲಿನ ವಚನವು ಬಹುಶಃ ಗಂಡ ಕೌಶಿಕನೊಡನೆ ಮುರಿದು ಬಿದ್ದ ಅಕ್ಕನ ವಿವಾಹ, ಸಾಂಸಾರಿಕ ಬಂಧನದಿಂದ ಅವಳು ತನ್ನನ್ನು ಬಿಡಿಸಿಕೊಂಡ ಕ್ಷಣವನ್ನು ಕಟ್ಟಿಕೊಡುತ್ತಿದೆ ಅನಿಸುತ್ತದೆ.

ವಚನದಲ್ಲಿ ಉಲ್ಲೇಖಗೊಂಡಿರುವ ಸಾಕ್ಷಿ, ಪತ್ರ, ಲೆಕ್ಕಗಳೆಲ್ಲ ಲೌಕಿಕ ಜಗತ್ತಿನ ಬಂಧನದ ಕುರುಹುಗಳು. ಕರಾರು ಪತ್ರದ ಒಪ್ಪಂದದ ಸಲಕರಣೆಗಳು. ಎಲ್ಲ ಬಂಧನಗಳಿಂದ ಕಳಚಿಕೊಂಡು ನಿಂತ ಅಕ್ಕನಿಗೆ ಮೈಮೇಲಿನ ಬಟ್ಟೆಯೂ ಕೂಡ ಬಂಧನದ ಕುರುಹಾಗಿ ಮುಳ್ಳಿನಂತೆ ಒತ್ತುತ್ತದೆ. ದೇಹದ ಮೇಲಿನ ವ್ಯಾಮೋಹ, ಕಳಚಿ ಹೋದ ಮೇಲೆ ಜೀವ, ಜೀವಿತದ ಆಸೆ, ಕಂದಿಹೋಗುತ್ತದೆ. ಕೊಟ್ಟ ಭಾಷೆ, ವಚನಗಳಲ್ಲಿ ಅರ್ಥ ಕಳೆದುಕೊಳ್ಳುತ್ತವೆ.

ಎಲ್ಲ ಆಮಿಷಗಳನ್ನು ಮೆಟ್ಟಿ ನಿಂತು ಭವಬಂಧನದ ಬಂಧ ಹರಿದು, ಸಂಪೂರ್ಣವಾಗಿ ಬಿಡುಗಡೆಗೊಂಡ ಜೀವಕ್ಕೆ ದೇಶ, ಕಾಲ, ಗಡಿಗಳ ಹಂಗಿಲ್ಲ. ಚೆನ್ನಮಲ್ಲಿಕಾರ್ಜುನನನ್ನು ನಂಬಿ ನಿಂದವಳಿಗೆ ಇತರೆ ಹಂಬಲಗಳಿಲ್ಲ. ಅಮೂರ್ತನಾದ ಚೆನ್ನಮಲ್ಲಿಕಾರ್ಜುನನ ಹಂಬಲದಲ್ಲಿ ಹೊರಟು ನಿಂತ ಅಕ್ಕನಿಗೆ ಈ ಲೌಕಿಕ ಜಗತ್ತಿನ ಎಲ್ಲ ವ್ಯಾಪಾರಗಳೂ ಗೌಣವಾಗಿ ಕಾಣುತ್ತದೆ.

ಸಾಯುವ, ಬೇಯುವ, ಲೌಕಿಕ ಗಂಡನನ್ನು ಒಲೆಯೊಳಗಿಕ್ಕು, ಎನ್ನುವ ಅಕ್ಕನ ಮನಸ್ಸಿನಲ್ಲಿ ತುಂಬಿ ಮಿಕ್ಕು ಮೀರಿ ಹೋಗುವ ಚೆನ್ನಮಲ್ಲಿಕಾರ್ಜುನ, ಅಕ್ಕನ ಪಯಣದೊಂದಿಗೆ, ವನವನ್ನೆಲ್ಲ ಆವರಿಸಿ, ತುಂಬಿರುವ ಚೈತನ್ಯ ಸ್ವರೂಪಿಯಾಗಿ, ಮಾರ್ಪಟ್ಟು ಅಕ್ಕನನ್ನು ಆವರಿಸಿಕೊಳ್ಳುತ್ತಾನೆ. ಮೂರ್ತತೆಯಿಂದ ಅಮೂರ್ತತೆಯೆಡೆಗೆ ಸಾಗುವ ಅಕ್ಕನ ದಿವ್ಯ ಪಯಣದಲ್ಲಿ ಚೆನ್ನಮಲ್ಲಿಕಾರ್ಜುನನು ಅರಿವಿನ ಕುರುಹಾಗಿ ಕಾಣುತ್ತಾನೆ.

●



# ಇಷ್ಟಲಿಂಗ : ಸಾಮಾಜಿಕ ಆಯಾಮ

**ಪ್ರಕಾಶ ಗಿರಿಮಲ್ಲನವರ**
*ಐ.ಟಿ.ಐ. ಕಾಲೇಜು, ಶಿವಬಸವನಗರ,*
*ಬೆಳಗಾವಿ ೫೯೦ ೦೧೦*
*೯೯೦೨೧ ೩೦೦೪೧*

'ಎನ್ನ ಕಷ್ಟಕುಲದಲ್ಲಿ ಹುಟ್ಟಿದೆನೆಂಬ ಕರ್ಮವ ಕಳೆದು, ಮುಟ್ಟಿ ಪಾವನವ ಮಾಡಿ ಕೊಟ್ಟನಯ್ಯಾ ಎನ್ನ ಕರಸ್ಥಲಕ್ಕೆ ಲಿಂಗವ; ಆ ಲಿಂಗ ಬಂದು ಸೋಂಕಲೊಡನೆ ಎನ್ನ ಸರ್ವಾಂಗದ ಅವಲೋಹವಳಿಯಿತ್ತಯ್ಯಾ; ಎನ್ನ ತನುವಿನಲ್ಲಿ ಗುರುವ ನೆಲೆಗೊಳಿಸಿದ, ಎನ್ನ ಮನದಲ್ಲಿ ಜಂಗಮವ ನೆಲೆಗೊಳಿಸಿದ, ಎನ್ನ ಅರುಹಿನಲ್ಲಿ ಪ್ರಸಾದವ ನೆಲೆಗೊಳಿಸಿದ. ಇಂತೀ ತ್ರಿವಿಧ ಸ್ಥಾನವ ಶುದ್ಧವ ಮಾಡಿದ.......ಅಭಿನವ ಚನ್ನಮಲ್ಲಿಕಾರ್ಜುನ'.

ಡೋಹರ ಕಕ್ಕಯ್ಯನ ವಚನವಿದು. ೧೨ನೇ ಶತಮಾನದಲ್ಲಿ ಎಲ್ಲ ವರ್ಗದ ಜನರು ಇಷ್ಟಲಿಂಗವನ್ನು ಧರಿಸುವ ಮೂಲಕ ಸಾಮಾಜಿಕ ಸಮಾನತೆಗೆ ನಾಂದಿ ಹಾಡಿದ್ದು ಧಾರ್ಮಿಕ ಇತಿಹಾಸದಲ್ಲೇ ದಾಖಲಾಗುವ ಸಂಗತಿಯಾಗಿದೆ. 'ಇಷ್ಟಲಿಂಗ' ಸಾಮಾಜಿಕ ಸಮಾನತೆಯ ಮುಖ್ಯ ಧ್ಯೇಯವುಳ್ಳ ಒಂದು ಧಾರ್ಮಿಕ ಲಾಂಛನವಾಗಿದೆ. ಇಳಕಲ್ ಮಠದ ಪೂಜ್ಯ ಮಹಾಂತಪ್ಪಗಳು ಇಷ್ಟಲಿಂಗವೆಂದರೆ ಜೆಸಿಬಿ ಇದ್ದಂತೆ, ತೆಗ್ಗನ್ನು ಮುಚ್ಚಿ, ದಿನ್ನೆಯನ್ನು ಸರಿಪಡಿಸಿ, ಸಮತಟ್ಟಾದ ಭೂಮಿಯನ್ನು ಜೆಸಿಬಿ ಸಿದ್ಧಗೊಳಿಸಿದಂತೆ, ಇಷ್ಟಲಿಂಗವು ಕೆಳವರ್ಗದ ತೆಗ್ಗನ್ನು ಮುಚ್ಚಿ, ಮೇಲ್ವರ್ಗದ ದಿನ್ನೆಯನ್ನು ಕೆಡವಿ ಸಮೃದ್ಧ ಸಮಾನತೆಯ ಸಮಾಜ ನಿರ್ಮಾಣಕ್ಕೆ ಕಾರಣವಾಗುತ್ತದೆ. ಇಷ್ಟಲಿಂಗ ಪೂಜೆಯ ಮೂಲಕ ಸಮಾನತೆ ಸಾಧಿಸುವುದು, ಕಷ್ಟದ ದುಡಿಮೆ ಮಾಡಿ ಕಾಯಕತತ್ವವನ್ನು ಪೂರ್ಣ ಪ್ರಮಾಣದಲ್ಲಿ ಪರಿಪಾಲಿಸುವುದು, ನಿಷ್ಠೆಯ ದಾಸೋಹದ ಮೂಲಕ ಗಳಿಕೆಯನ್ನು ಸಮಾಜದ ಪ್ರಗತಿಗೆ ವಿನಯೋಗಿಸುವುದು ಶರಣಧರ್ಮದ ಪ್ರಮುಖ ಲಕ್ಷಣಗಳಾಗಿವೆ.

'ವಾಸ್ತವವಾಗಿ, ದೇವಾಲಯ-ಮಸೀದಿ-ಚರ್ಚುಗಳನ್ನು ಸೃಷ್ಟಿಸಿ, ಅಲ್ಲಿ ನಾವೇ ಸ್ಥಾಪಿಸಿರುವ ವಿಗ್ರಹವನ್ನೇ ದೇವರೆಂದು ಪೂಜಿಸುವಂತೆ ಮಾಡಿರುವುದು ಪೂಜಾರಿ-ಪುರೋಹಿತರ ಹುನ್ನಾರ. ದೇವರು ನಮಗಿಂತ ಭಿನ್ನ ಎಂಬ ಕಲ್ಪನೆಯೇ ಕುತಂತ್ರದ್ದು. ಶತಶತಮಾನಗಳ ಈ ಕುತಂತ್ರವನ್ನು ಶರಣರು ಗಂಭೀರವಾಗಿ ಗಮನಿಸಿದರು; ಬಯಲಿಗೆಳೆದರು. ಪುರೋಹಿತಶಾಹಿ ಅಂತಹ ನಂಬಿಕೆಯನ್ನು ತುಂಬಿದ್ದ ಕಾರಣ ಜನರ ದೃಷ್ಟಿಯೆಲ್ಲ ವಿಗ್ರಹ, ಗುಡಿ, ಕ್ಷೇತ್ರಗಳ ಕಡೆಗೆ ಹರಿದಿತ್ತೇ ವಿನಃ ತಮ್ಮ ಕಡೆಗೆ ತಾವು ನೋಡಿಕೊಳ್ಳಲಿಲ್ಲ. ಈ ಕಳೆಯನ್ನು ಕಿತ್ತು ಹೊಸ ಬೆಳೆ ತೆಗೆಯುವುದೇ ೧೨ ಶತಮಾನದ ಶರಣರ ಆಶಯವಾಗಿತ್ತು. ಈ ಆಶಯದ ಮುಂಬೆಳಗಾಗಿ ಇಷ್ಟಲಿಂಗ ಸಹಕಾರಿಯಾಯಿತು.

ಸ್ತ್ರೀಯರನ್ನು ಶೂದ್ರರನ್ನು ಅನಾಗರಿಕರನ್ನಾಗಿ ಕಾಣುವಂತಹ ಸಮಾಜದಲ್ಲಿ, ಅವರಿಗೆ ಸಮಾನತೆಯನ್ನು ಕಲ್ಪಿಸಬೇಕೆಂಬ ಕಾರಣಕ್ಕಾಗಿಯೇ ಇಷ್ಟಲಿಂಗ ಸಾಧನವಾಗಿ ಬಂದಿತು. ಈ ಕುರಿತು ಇಮ್ಮಡಿ ಶಿವಬಸವ ಸ್ವಾಮಿಗಳು ತುಂಬ ಅರ್ಥಪೂರ್ಣವಾಗಿ ವಿವರಿಸುತ್ತಾರೆ:

'ಉಪನಯನ ಸಂಸ್ಕಾರ ಲಭಿಸುವವರೆಗೂ ದ್ವಿಜನಾಗುವುದಿಲ್ಲ. ದ್ವಿಜನಾಗದ ಹೊರತು ಅಗ್ನಿಹೋತ್ರ ಯಜ್ಞ-ಯಾಗ ಮುಂತಾದ ಯಾವುದೇ ಕರ್ಮಕಲಾಪಗಳಿಗೆ ಅರ್ಹತೆ ಲಭಿಸುವುದಿಲ್ಲ. ಉಪನಯನ ಸಂಸ್ಕಾರ ಕ್ರಿಯೆಯೇ ಅರ್ಹತೆಯನ್ನು ತಂದುಕೊಡುವುದಾದರೆ ಅದು ಎಲ್ಲ ವರ್ಣದವರಿಗೂ ತಂದುಕೊಡಬೇಕಾಗುತ್ತದೆ. ಈ 'ಸಂಸ್ಕಾರ'ವನ್ನು ಸಕಲ ಮಾನವರಿಗೂ ಲಿಂಗಭೇದವಿಲ್ಲದೆ, ವರ್ಣಭೇದವಿಲ್ಲದೆ ಅನ್ವಯಿಸಿದ್ದ ಪಕ್ಷದಲ್ಲಿ ಪ್ರಾಯಶಃ ನಮ್ಮ ದೇಶದಲ್ಲಿ ಜಾತಿಯ ಸಮಸ್ಯೆಯೇ ಉದ್ಭವಿಸುತ್ತಿರಲಿಲ್ಲವೇನೋ? ನಿಸರ್ಗಸಿದ್ಧವಾದ ದೈಹಿಕ ಕ್ರಿಯೆಯ ಆಧಾರದ ಮೇಲೆ ಸ್ತ್ರೀಯರೂ ಸಹ ಈ ಸಂಸ್ಕಾರದಿಂದ ವಂಚಿತರಾಗಿದ್ದಾರೆ. ಸಂಸ್ಕಾರದಿಂದ ಅರ್ಹತೆಯು ಲಭಿಸುತ್ತದೆಯೋ? ಹುಟ್ಟಿನಿಂದ ಲಭಿಸುತ್ತದೆಯೋ? ಹುಟ್ಟಿನಿಂದಲೇ ಮೂರು ವರ್ಣದವರಿಗೂ ವೇದಾಧ್ಯಯನದ ಅರ್ಹತೆ ಇದ್ದ ಪಕ್ಷದಲ್ಲಿ ಈ ಸಂಸ್ಕಾರದಿಂದ ಆಗಬೇಕಾದ ಮತ್ತೊಂದು ಪ್ರಯೋಜನವೇನು? ಸಂಸ್ಕಾರದಿಂದ ಅರ್ಹತೆ ಲಭಿಸುತ್ತದೆ ಎನ್ನುವುದಾದರೆ ಎಲ್ಲ ವರ್ಣದವರಿಗೂ ವೇದಾಧ್ಯಯನದ ಅರ್ಹತೆ ಬರಬೇಕಾಗುತ್ತದೆ. ಒಂದು ವೇಳೆ ಗುಣ ಉಳ್ಳವರಿಗೆ ಮಾತ್ರ ಈ ಸಂಸ್ಕಾರದಿಂದ ವೇದಾಧ್ಯಯನಾರ್ಹತೆಯನ್ನು ಮಾನ್ಯ ಮಾಡಿದರೆ ಎಲ್ಲ ವರ್ಣದಲ್ಲೂ ಗುಣವುಳ್ಳವರು ದೊರೆಯುತ್ತಾರೆ. ಒಂದು ವರ್ಣಕ್ಕೆ ಸೇರಿದ ಎಲ್ಲರೂ ಗುಣವಂತರಾಗಿಯೇ ಇರುತ್ತಾರೆ ಎನ್ನಲು ಸಾಧ್ಯವೇ? ಆಗ ವ್ಯಕ್ತಿಯ ನೈತಿಕ ಮಟ್ಟವನ್ನನುಸರಿಸಿ ಸಂಸ್ಕಾರವನ್ನು ಕೊಡಬೇಕಾಗುತ್ತದೆ. ಆದರೆ ಅಂದಿನ ಯುಗದ ಸಾಂಪ್ರದಾಯಿಕ ವ್ಯಕ್ತಿಗಳಿಗೆ ಇದು ಅಧರ್ಮವೆನಿಸಿ ಮಾನ್ಯವಾಗಲಿಲ್ಲ. ಬಸವಣ್ಣನವರಿಗೆ ಈ ವಿಧವಾದ ಸಾಮಾಜಿಕ ವಿಷಮತೆಗೆ ಕಾರಣವಾದ ಪ್ರಕ್ರಿಯೆಯ ವಿರುದ್ಧ ಹೋರಾಟ ನಡೆಸಬೇಕಾದುದು ಅನಿವಾರ್ಯವಾಯಿತು. ಅವರು ಸಕಲ ಮಾನವರಿಗೂ ಅನ್ವಯವಾಗುವ ಸಾಮಾಜಿಕ ಅಸಮತೆಯನ್ನಳಿಸುವ ವಿಶಿಷ್ಟ ಸಂಸ್ಕಾರವನ್ನು ಆಲೋಚಿಸಬೇಕಾಯಿತು. ಸಾಮಯಿಕವಾದ ಈ ಸಮಸ್ಯೆಗೆ ಅವರ ಹೃದಯ ಮಾತ್ರ ಸ್ಪಂದಿಸಿತು.' (ಸಾಮಾಜಿಕ ಮೌಲ್ಯವಾಗಿ ಲಿಂಗ: ಡಾ. ಇಮ್ಮಡಿ ಶಿವಬಸವ ಸ್ವಾಮಿಗಳು)

ಸ್ತ್ರೀಯರಿಗೂ ಕೆಳವರ್ಗದವರಿಗೂ ಇಷ್ಟಲಿಂಗ ಪೂಜೆಯ ಹಕ್ಕನ್ನು ನೀಡುವ ಮೂಲಕ ಬಸವಾದಿ ಶಿವಶರಣರು ಸಾಮಾಜಿಕ ಸಮಾನತೆಗೆ ನಾಂದಿ ಹಾಡಿದರು. ವಚನ ಚಳುವಳಿ ಹುಟ್ಟಿದ್ದೆ ಸಾಮಾಜಿಕ ನ್ಯಾಯಕ್ಕಾಗಿ. ಸಾವಿರಾರು ವಚನಗಳನ್ನು ಈ ನಿಟ್ಟಿನಲ್ಲಿ ಉದ್ಧರಿಸಬಹುದು. ಆದರೆ ೧೫ನೇ ಶತಮಾನದಲ್ಲಿ ವಚನಗಳ ಸಂಕಲನ, ಸಂಗ್ರಹ, ಸಂಪಾದನಾ ಘಟ್ಟದಲ್ಲಿ ಅನೇಕ ಪ್ರಕ್ಷಿಪ್ತ ವಚನಗಳು ಹುಟ್ಟಿಕೊಂಡವು. ಈ ವಚನಗಳ ನಡುವೆ ಸಂಸ್ಕೃತ ಉಕ್ತಿಗಳನ್ನು ಉದ್ದೇಶಪೂರ್ವಕವಾಗಿ ಸೇರಿಸಲಾಯಿತು. ಈ ವಿಷಯವಾಗಿ ಸಂಶೋಧನೆ ಮಾಡಿರುವ ಡಾ. ಇಮ್ಮಡಿ ಶಿವಬಸವ ಸ್ವಾಮಿಗಳು ಹೀಗೆ ಹೇಳುತ್ತಾರೆ:

'ಕೆಲವರು ವೈದಿಕ ನೆಲೆಯಲ್ಲೇ ಲಿಂಗಾಯತ ಧರ್ಮವನ್ನು ಸದೃಢವಾಗಿ ನೆಲೆಗೊಳಿಸಲು ಪ್ರಯತ್ನಿಸಿದ್ದನ್ನು ಕೆಲವು ವಚನಗಳಲ್ಲಿ ಕಾಣಬಹುದು. ಚನ್ನಬಸವಣ್ಣನವರ ಒಂದು ಬಹು ದೀರ್ಘವಾದ ವಚನವು ಕರ್ಮಠತನದ ಪರಮಾವಧಿ ಎನ್ನಬಹುದಾದ 'ಇಷ್ಟಲಿಂಗ' ದೀಕ್ಷಾವಿಧಿಯನ್ನು ಹೇಳಿದೆ. ಇದನ್ನು ಓದಿದವರಿಗೆ ಸಾಧನೆಗೆ ಭಯವನ್ನು ಹುಟ್ಟಿಸುವಂತಿದೆ. ಅತ್ಯಂತ ಸರಳವಾದ ಶಿವಯೋಗ ಸಾಧನೆಗೆ ಇದು ವಿರೋಧವೆನಿಸುತ್ತದೆ. ಈ ವಚನ ಸರ್ವಥಾ ಚನ್ನಬಸವಣ್ಣನವರದ್ದು ಎಂದು ಹೇಳಲು ಕಷ್ಟವಾಗುತ್ತದೆ. ಇದು ಖಚಿತವಾಗಿ ಪ್ರಕ್ಷಿಪ್ತವೆನ್ನಲು ಯಾವ ಅಡ್ಡಿಯೂ ಇಲ್ಲ. ಕಾಲಾಂತರದಲ್ಲಿ ಶಿವಶರಣರ ಹೆಸರಿನಲ್ಲಿ ಸೇರ್ಪಡೆಗೊಂಡಿರುವ ಕೆಲವು ಪ್ರಕ್ಷಿಪ್ತ ವಚನಗಳಲ್ಲಿ ಸಂಸ್ಕೃತೋಕ್ತಿಗಳ ಸೇರ್ಪಡೆ ಅಧಿಕವಾಗಿರುವಂತೆ ಕಾಣುತ್ತದೆ. ಈ ಸಂಸ್ಕೃತೋಕ್ತಿಗಳು ಷಟ್‌ಸ್ಥಲ ವಚನಗಳಲ್ಲಿ ಕಡಿಮೆ ಇದ್ದು, 'ಹೆಚ್ಚಿನ ವಚನಗಳು' ವಿಭಾಗದಲ್ಲಿ ಹೆಚ್ಚಾಗಿವೆ.' (ವಚನಗಳಲ್ಲಿ ಸಂಸ್ಕೃತೋಕ್ತಿಗಳು : ಡಾ. ಇಮ್ಮಡಿ ಶಿವಬಸವ ಸ್ವಾಮಿಗಳು ಪ್ರಸ್ತಾವನೆ ಪು. ೪)

ಎಲ್ಲರೂ ಸಮಾನರು ಎಂದು ಸರ್ವಸಮಾನತೆಯ ಸೂತ್ರವನ್ನು ಸಮಾಜದಲ್ಲಿ ಅನ್ವಯಿಸಿ ಸಾಧಿಸುವಾಗ ಅದನ್ನು ಕೇವಲ ತಾತ್ವಿಕವಾಗಿ ಹೇಳಿದರೆ ಸಾಲದು. ಅದನ್ನು ಅನುಭವಕ್ಕೆ ತಂದುಕೊಡುವ ಪ್ರಾಯೋಗಿಕ ಆಚರಣೆಬೇಕಾಗಿತ್ತು. ಇಲ್ಲವಾದರೆ ಸಮಾನತೆ ಎನ್ನುವುದು ಮಾತಿನಲ್ಲಿಯೇ ಉಳಿಯುತ್ತಿತ್ತು. ಆ ಮಾತಿನ ಸಮಾನತೆ ಮೊದಲಿನಿಂದಲೂ ನಮ್ಮಲ್ಲಿತ್ತು. ಈಗಲೂ ಇದೆ. ನಮಗೆ ಒಳಿತು ಕೆಡಕು ಎಲ್ಲಾ ಒಂದೇ ಎನ್ನುವವರು ತಮಗೆ ಒಳಿತೇ ಇರಲಿ ಎಂದು ಮೊದಲು ಆರಿಸಿಕೊಳ್ಳುತ್ತಾರೆ. ನಮಗೆ ಕಾರೂ ಒಂದೇ, ಗಾಡಿಯೂ ಒಂದೇ!, ಯಾವ ಭೇದವೂ ಇಲ್ಲ, ಆದರೆ ನಮಗೆ ಕಾರೇ ಇರಲಿ, ನಮಗೆ ಮೃಷ್ಟಾನ್ನವೂ ಒಂದೇ, ಗಂಜಿಯೂ ಒಂದೇ, ಆದರೆ ನಮಗೆ ಮೊದಲನೆಯದೇ ಇರಲಿ, ಎನ್ನುವಂತಹ ಸಮಾನತೆ ನಮ್ಮದು. ಎಲ್ಲಾ ಒಂದೇ, ಕಸಗುಡಿಸಿದರೇನು? ಮಾಲೆ ಧರಿಸಿದರೇನು? ಆದರೆ ನನಗೆ ಮಾಲೆಯೇ ಇರಲಿ ನಿನಗೆ ಕಸ ಗುಡಿಸುವುದೇ ಇರಲಿ- ಎನ್ನುವಂತಹ ಬುದ್ಧಿವಂತಿಕೆಯ ಮಾತುಗಳಿಂದ ಸಮಾನತೆ ಸಾಧಿತವಾಗುವುದಿಲ್ಲ. ಸಾಮಾಜಿಕವಾಗಿ ಧಾರ್ಮಿಕವಾಗಿ ಎಲ್ಲರೂ ಸಮಾನರು ಎನ್ನುವುದನ್ನು ಬಸವಣ್ಣ ಸಾಧಿಸಿ ತೋರಿಸಬೇಕಾಗಿತ್ತು. ದೀನರಲ್ಲಿ ದಲಿತರಲ್ಲಿ ಆತ್ಮವಿಶ್ವಾಸವನ್ನು ಮೂಡಿಸಬೇಕಾಗಿತ್ತು. ಆದ್ದರಿಂದ ತಾನು ಧರಿಸುವ ಲಿಂಗವನ್ನೇ ಅವರಿಗೂ ಕೊಟ್ಟು, ಯಾವ ಮೇಲು ಕೀಳುಗಳಿಲ್ಲದ ಪೂರ್ಣ ಸಮಾನತೆಯ ಅರಿವನ್ನು ಅವರಿಗೆ ತಂದುಕೊಡಬೇಕಾಯಿತು. ಅಂದರೆ ಇಷ್ಟಲಿಂಗ ಸಾಮಾಜಿಕ ಸಮಾನತೆಯ ಸಾಕಾರ ಸಾಕ್ಷಿಯಾಯಿತು. ಇಂದಿನ ಆಧುನಿಕ ಯುಗದಲ್ಲಿ ಈ ಸಮಾನತೆ ಹಲವು ಮಾರ್ಗಗಳಿಂದ ಸಾಧಿತವಾಗಿರುವುದರಿಂದ ಅದರ ಮಹತ್ವ ಇಂದು ಅಷ್ಟಾಗಿ ಮನವರಿಕೆ ಯಾಗಲಾರದು. ಆದರೆ ಅಂದು ಸಮಷ್ಟಿ ಚೈತನ್ಯವನ್ನು ಉದ್ದೀಪಿಸುವುದರಲ್ಲಿ ಬಹಳ ಪ್ರಭಾವಶಾಲಿಯಾದ ಪಾತ್ರವಹಿಸಿತು.

ಬಸವಣ್ಣನವರ ಈ ಲಿಂಗನಿಷ್ಠೆಯನ್ನು ಅತಿರೇಕವಾದ (Fanaticism) ಎಂದು ಕೆಲವರು ತಿಳಿಯುವ ಸಂಭವವುಂಟು. ಇತರ ಕ್ಷುದ್ರದೇವತೆಗಳನ್ನು ಗೇಲಿ ಮಾಡಿ ಇದೊಂದನ್ನೇ ಪೂಜಿಸಬೇಕೆಂದು ಹೇಳುತ್ತ 'ಪತಿವ್ರತೆಗೆ ಗಂಡನೊಬ್ಬನೇ ಕಾಣಿರೋ' ಎಂದು ಮುಂತಾಗಿ ಹೇಳಿರುವುದರಲ್ಲಿ ಅವರ ಸರ್ವಾಧಿಕಾರೀ ಮನೋಧರ್ಮ ವ್ಯಕ್ತವಾಗುತ್ತದೆಯೆಂದು

ಹೇಳಿರುವವರೂ ಇದ್ದಾರೆ. ಆದರೆ ಅವರ ನಿಷ್ಠೆಯಲ್ಲಿ ಕಾಣುವುದು ಸಂಕುಚಿತತೆಯಾಗಲೀ ಸರ್ವಾಧಿಕಾರವಾಗಲೀ ಅಲ್ಲ; ಮನಸ್ಸನ್ನು ಕೇಂದ್ರೀಕರಿಸಿ ಅಂತರ್‌ಮುಖಿಗೊಳಿಸುವ ಯಶಸ್ವಿಯಾದ ಪ್ರಯತ್ನ. 'ದೇವನೊಬ್ಬ ನಾಮ ಹಲವು' ಎನ್ನುವುದು ಅವರಿಗೆ ಗೊತ್ತು, ಆದರೆ ಕ್ಷುದ್ರ ಬಯಕೆಗಳ ಈಡೇರಿಕೆಗಾಗಿ ಆ ನಾಮಗಳನ್ನು ಬಳಸಬಾರದೆನ್ನುವ ಸತ್‌ಪರವಾದ ನಿಷ್ಠೆ ಅವರದು.

ಅರಗುತಿಂದು ಕರಗುವ ದೈವ, ಉರಿಯಕಂಡು ಮುರುಟುವ ದೈವ, ಕಾಳಯ್ಯ, ಕೇತಯ್ಯ, ಮಾರಿ ಚೌಡಿ ಮೊದಲಾದ ಹಾದಿಬೀದಿಗಳ ಕ್ಷುದ್ರ ಉಪಾಸನೆಯನ್ನು ಅವರು ನಿರಾಕರಿಸಿದುದು ಪರಿಶುದ್ಧ ನಿಷ್ಠೆಯ ಕೇಂದ್ರೀಕರಣಕ್ಕಾಗಿ. ಉದಾತ್ತವಾದುದಕ್ಕೆ ಒಲಿದ ಮೇಲೆ ಮತ್ತೆ ಕುತ್ಸಿತಕ್ಕೆ ಇಳಿಯಬಾರದು. ಅದು ಗಂಗಾನದಿಯಲ್ಲಿ ಮಿಂದು ಗಂಜಳದಲ್ಲಿ ಹೊರಳಿದಂತೆ ಆಗುತ್ತದೆ. ನೀರ ಕಂಡಲ್ಲಿ ಮುಳುಗುವುದು, ಮರನ ಕಂಡಲ್ಲಿ ಸುತ್ತುವುದು, ತೀರ್ಥಕ್ಷೇತ್ರಗಳಿಗೆ ತಿರುಗುವುದು, ಯಜ್ಞಯಾಗಾದಿಗಳಲ್ಲಿ ತೊಡಗುವುದು, ದೇವಾಲಯಗಳಲ್ಲಿ ಅದ್ಧೂರಿಯ ಪೂಜೆ, ಇವೆಲ್ಲಾ ಭಕ್ತಿಯನ್ನು ಅಂತರಂಗದ ಕಡೆಗೆ ತಿರುಗಿಸುವುದರ ಬದಲು ಸಾಮೂಹಿಕ ಪ್ರದರ್ಶನಕ್ಕೆ ಕಾರಣವಾಗಿ ಕೊನೆಗೆ ಶೋಷಣೆಯಲ್ಲಿ ಪರ್ಯವಸಾನವಾಗುತ್ತದೆ. ಆದುದರಿಂದ ಇವೆಲ್ಲವುಗಳನ್ನು ನಿರಾಕರಿಸಿ ಒಂದನ್ನೇ ನಂಬಬೇಕೆಂಬ ಏಕೈಕ ನಿಷ್ಠೆಯನ್ನು ಬೋಧಿಸಿದುದು ಸರ್ವಾಧಿಕಾರವಲ್ಲ; ಸರ್ವಶಕ್ತಿ ವಿಕಾಸದ ಅಭೀಪ್ಸೆ, 'ನನ್ನೊಬ್ಬನನ್ನೇ ನಂಬಿ' ಎಂದು ಬಸವಣ್ಣ ಹೇಳಲಿಲ್ಲ. ನಿಮ್ಮನ್ನೇ ನಂಬಿ, ನಿಮ್ಮ ಅಂತರಂಗವೇ ಪರಮ ಪ್ರಮಾಣ' ಎಂದು ಅಂತರಂಗದ ಅವಲೋಕದ ಕಡೆಗೆ ತಿರುಗಿಸಿದ. ಆದುದರಿಂದ ಇದು ಸರ್ವಾದಿಕಾರವಲ್ಲ, ಪುರೋಹಿತಶಾಹಿಯ ಸರ್ವಾಧಿಕಾರದ ವಿಕೇಂದ್ರೀಕರಣ, ಸಾಮಾಜಿಕ ಸೌಲಭ್ಯಗಳ ಆರಾಧನೆ ಮತ್ತು ಉಪಾಸನೆಗಳ ಸಾಮಾಜೀಕರಣ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಮಾತೆಂದರೆ ಶೋಷಣೆಯನ್ನು ಪರಾವಲಂಬನೆಯನ್ನು ತೊಡೆದು ಹಾಕಿ ಸರ್ವಸಮಾನತೆಯ ಆಧಾರದ ಮೇಲೆ ಎಲ್ಲರ ವಿಕಾಸಕ್ಕೆ ಕಾರಣವಾಗುವ ಮುಕ್ತ ಸಮಾಜದ ರಚನೆಗಾಗಿ ಶರಣರು ಹೋರಾಡಿದುದು; ಮತ್ತು ಅದನ್ನು ಸಾಧ್ಯವನ್ನಾಗಿ ಮಾಡಿ ತೋರಿಸಿದುದು. ಈ ಯುಗದಲ್ಲಿಯೂ ಸಾಧ್ಯವಾಗದೇ ಇರುವಷ್ಟರ ಮಟ್ಟಿಗೆ ಶರಣರ ಆ ಚಳುವಳಿ ಸಾಮಾಜಿಕ ಪರಿವರ್ತನೆಯನ್ನು ತಂದಿತು. ವರ್ಣ ವ್ಯವಸ್ಥೆಯನ್ನು ಮುರಿದು ಮುಂದುವರಿಯಿತು.

ಇದನ್ನು ಸ್ಪಷ್ಟಪಡಿಸುವುದಕ್ಕೆ ಒಂದು ಉದಾಹರಣೆಯನ್ನು ಕೊಡಬಹುದು. ಇದನ್ನು ಈಗಾಗಲೇ ಒಂದೆರಡು ಕಡೆಗಳಲ್ಲಿ ದಾಖಲುಗೊಳಿಸಿದ್ದೇನೆ. ಇಲ್ಲಿ ಇನ್ನೊಮ್ಮೆ ಅದನ್ನು ಹೇಳುವುದು ಅಪ್ರಸ್ತುತವಾಗಲಾರದು. ನಾಡಿನ ಮಹಾಕವಿ ಕುವೆಂಪು ಅವರ ವಿಚಾರಶೀಲ ನಿಲವನ್ನೂ, ವಿಶ್ವ ಮಾನವ ಪ್ರಜ್ಞೆಯನ್ನು ರೂಢಿಸುವ ಅವರ ಕಳಕಳಿಯನ್ನು ಅವರ ಭಾಷಣಗಳನ್ನು ಓದಿದವರೆಲ್ಲಾ ಬಲ್ಲರು. ಒಮ್ಮೆ, ಕೆಲವು ವರ್ಷಗಳ ಹಿಂದೆ, ಅವರ ಬಳಿಗೆ ವಿಶ್ವ ಹಿಂದೂ ಪರಿಷತ್ತಿನ ಕೆಲವು ಮುಖಂಡರು ಬಂದರು. ವಿಶ್ವ ಹಿಂದೂ ಪರಿಷತ್ತಿಗೆ ಉಪಾಧ್ಯಕ್ಷರನ್ನಾಗಿ ಕುವೆಂಪು ಅವರನ್ನು ಒಪ್ಪಿಸಬೇಕೆಂಬುದು ಅವರ ಉದ್ದೇಶವಾಗಿತ್ತು. ಅದನ್ನು ಅವರ ಬಳಿ ಹೇಳಿದರು. ಅದನ್ನು ಕೇಳಿದ ಕುವೆಂಪು ಅವರು ಕೆಲವು ಷರತ್ತುಗಳನ್ನು



ಅವರ ಮುಂದಿಟ್ಟರು. ಮೊದಲನೆಯದಾಗಿ ವಿಶ್ವ ಹಿಂದೂ ಪರಿಷತ್ತು ಚತುರ್ವರ್ಣಗಳನ್ನು ಅಸ್ಪೃಶ್ಯತೆಯನ್ನು ಒಪ್ಪುವುದಿಲ್ಲ ಎಂಬುದನ್ನು ಸಂದಿಗ್ಧತೆಗೆ ಅವಕಾಶವಿಲ್ಲದಂತೆ ಸ್ಪಷ್ಟವಾಗಿ ಘೋಷಿಸಬೇಕು; ಮತ್ತು ಅವುಗಳನ್ನು ನಿರ್ಮೂಲ ಮಾಡಲು ತೀವ್ರವಾದ ಕಾರ್ಯಕ್ರಮಗಳನ್ನು ಹಾಕಿಕೊಳ್ಳಬೇಕು. 'ಹಿಂದೂಗಳೆಲ್ಲರೂ ಸರ್ವ ಸಮಾನರು' ಎಂದು ಸಾರಬೇಕು. ಒಬ್ಬ ಅಸ್ಪೃಶ್ಯನು ಗುಣದಿಂದ ಯೋಗ್ಯನಾದರೆ ಉತ್ತಮರಿಗೆ ಆತನು ಎಲ್ಲ ರೀತಿಯಿಂದಲೂ ಸರಿಸಮಾನವಾಗಬೇಕು. ಹಿಂದೂಗಳ ಯಾವುದೇ ಮಠಕ್ಕೆ ಒಬ್ಬ ಅಸ್ಪೃಶ್ಯನನ್ನು, ಅವರು ಆ ಮಟ್ಟಕ್ಕೆ ಬೆಳೆದರೆ, ಸ್ವಾಮಿಯನ್ನಾಗಿ ಮಾಡುವುದು ಸಾಧ್ಯವಾಗಬೇಕು. ಇದನ್ನು ತಾತ್ವಿಕವಾಗಿಯಾದರೂ ಒಪ್ಪಿಕೊಳ್ಳಬೇಕು. ಈ ಕೂಡಲೇ ಇದನ್ನು ಕಾರ್ಯಗತಗೊಳಿಸಿ ಎಂದು ಕುವೆಂಪು ಹೇಳಲಿಲ್ಲ. ತಮ್ಮ ಯೋಗ್ಯತೆಯಿಂದ ಯಾರಾದರೂ ಆ ಮಟ್ಟಕ್ಕೆ ಬಂದರೆ ಅಸ್ಪೃಶ್ಯರೂ ಹಿಂದೂ ಮಠಗಳಿಗೆ ಸ್ವಾಮಿಗಳಾಗಬಲ್ಲರು ಎಂದು ತಾತ್ವಿಕವಾಗಿ ಘೋಷಿಸಿದರೆ ಸಾಕು – ಎಂದು ಅವರು ಹೇಳಿದರು. ಆದರೆ ಈ ಮಾತುಗಳನ್ನು ಕೇಳುತ್ತಿದ್ದ ಆ ಮುಖಂಡರು ಒಳಗೊಳಗೆ ಬೆವತಿರಬೇಕು. ತಾವು ಮತ್ತೆ ಬರುವುದಾಗಿ ಏನೇನೋ ಸಬೂಬುಗಳನ್ನು ಹೇಳಿ ಹೋದ ಅವರು, ಕುವೆಂಪು ಅವರ ಮನೆಯ ಕಡೆ ಮತ್ತೆ ತಲೆಹಾಕಲಿಲ್ಲ.

ಈ ಇಪ್ಪತ್ತನೇ ಶತಮಾನದಲ್ಲಿ ಇದು ನಮ್ಮ ಸ್ಥಿತಿ. ವರ್ಣ ವ್ಯವಸ್ಥೆಯ ಸಂಪೂರ್ಣ ನಿರ್ಮೂಲನಕ್ಕೆ ಇನ್ನೂ ನಾವು ಸಿದ್ಧರಿಲ್ಲ. ಆದರೆ ಅದನ್ನು ಈಗ ಯಾರೂ ಉಳಿಸಿಕೊಳ್ಳಲಾರರೆಂಬ ಮಾತು ಬೇರೆ, ಆಧುನಿಕ ಯುಗ ಪರಿಸರವೇ ಅದನ್ನು ತೆಗೆದುಹಾಕುತ್ತದೆ. ಅಂತಹ ಈ ಯುಗದಲ್ಲಿಯೂ ನಾವು ಒಬ್ಬ ಹರಿಜನ, ಮಠದ ಸ್ವಾಮಿಯಾಗಬಲ್ಲನೆಂಬುದನ್ನು ತಾತ್ವಿಕವಾಗಿಯಾದರೂ ಒಪ್ಪಿಕೊಳ್ಳುವುದಕ್ಕೆ ಸಿದ್ಧರಿಲ್ಲ. ಆದರೆ ೯೦೦ ವರ್ಷಗಳ ಹಿಂದೆ ಶರಣರು ತಾತ್ವಿಕವಾಗಿಯಲ್ಲ, ಪ್ರಾಯೋಗಿಕವಾಗಿಯೂ ಸಾಧಿಸಿ ತೋರಿಸಿದುದನ್ನು ನೆನೆದರೆ ಅವರ ಆ ಚಳುವಳಿಯ ಮಹತ್ವ ಮನದಟ್ಟಾಗುತ್ತದೆ. ಉರಿಲಿಂಗದೇವ ಮತ್ತು ಉರಿಲಿಂಗಪೆದ್ದಿಯ ಕಥೆಯನ್ನು ಸ್ಮರಿಸಿಕೊಳ್ಳಬಹುದು. ಉರಿಲಿಂಗದೇವ ಕಾಂಧಾರದಲ್ಲಿ ಒಂದು ಮಠಕ್ಕೆ ಸ್ವಾಮಿಯಾಗಿದ್ದವನು. ಅನಿರೀಕ್ಷಿತವಾದ ಒಂದು ಘಟನೆ ಒಮ್ಮೆ ಸಂಭವಿಸುತ್ತದೆ. ಪೆದ್ದಣ್ಣ ಎಂಬುವವನೊಬ್ಬ ಆ ಭಾಗದಲ್ಲಿ ಕಳ್ಳತನದಿಂದ ಜೀವನ ಮಾಡುತ್ತಿದ್ದವನು, ಆತನ ಹೆಂಡತಿ ಕಾಳವ್ವೆ ಇಬ್ಬರೂ ಅಸ್ಪೃಶ್ಯ ದಂಪತಿಗಳು. ಅವಕಾಶ ಸಿಕ್ಕಾಗ ಕಳ್ಳತನ ಮಾಡುತ್ತ ಹೇಗೋ ಜೀವನವನ್ನು ಸಾಧಿಸುತ್ತಿದ್ದನು. ಪೆದ್ದಣ್ಣ, ಒಮ್ಮೆ ಉರಿಲಿಂಗದೇವರು ತಮ್ಮ ಶಿಷ್ಯನೊಬ್ಬನಿಗೆ ದೀಕ್ಷೆಯನ್ನು ಕೊಡುವ ಕಾರ್ಯವನ್ನಿಟ್ಟಿಕೊಂಡಿದ್ದರು. ಅದಕ್ಕಾಗಿ ಆ ಭಕ್ತ ಎಲ್ಲ ಸಿದ್ಧತೆಗಳನ್ನು ಮಾಡಿಕೊಂಡಿದ್ದ. ಅದನ್ನು ಹೇಗೋ ಹೊಂಚು ಹಾಕಿದ ಪೆದ್ದಣ್ಣ ಅದೆಲ್ಲವನ್ನು ಕದಿಯುವ ಉದ್ದೇಶದಿಂದ ಯಾರೂ ಅರಿಯದಂತೆ ಆ ಕೋಣೆಯನ್ನು ಪ್ರವೇಶಿಸಿದ. ಆದರೆ ಆತನಿಗೆ ಹೊರಹೋಗಲು ಅವಕಾಶವೇ ಆಗಲಿಲ್ಲ. ಗುರುಗಳು, ಅವರನ್ನು ಹಿಂಬಾಲಿಸಿ ಶಿಷ್ಯ, ಎಲ್ಲರೂ ಕೋಣೆಯನ್ನು ಪ್ರವೇಶಿಸಿದರು ಮುಂಗಾಣದ ಪೆದ್ದಣ್ಣ ಮೇಲಕ್ಕೆ ಹಾರಿ ಆ ಕೋಣೆಯ ಅಟ್ಟದ ಮೇಲೆ ಅವಿತುಕೊಂಡು ಅಲ್ಲಿಗೆ ದೀಕ್ಷಾ ವಿಧಿಗಳೆಲ್ಲಾ ಸ್ಪಷ್ಟವಾಗಿ ಕಾಣುವಂತಿತ್ತು. ದೀಕ್ಷೆಯ ಕಾರ್ಯ

ಪ್ರಾರಂಭವಾಯಿತು. ಉಪಾಸನೆಯ ಕ್ರಮವನ್ನೆಲ್ಲಾ ಹೇಳಿ ಆತ ಶಿಷ್ಯನಿಗೆ ಲಿಂಗವನ್ನು ಅನುಗ್ರಹಿಸಿದ. ಇದನ್ನೆಲ್ಲಾ ಮೇಲೆ ಕುಳಿತು ನೋಡುತ್ತಿದ್ದ ಪೆದ್ದಣ್ಣನ ಮನಸ್ಸಿನ ಮೇಲೆ ತುಂಬಾ ಪರಿಣಾಮವಾಯಿತು. ಅಲ್ಲಿಂದ ನೇರವಾಗಿ ಇಳಿದು ಬಂದು ಉರಿಲಿಂಗದೇವರಿಗೆ ಶರಣಾಗತನಾದ. ತನ್ನ ತಪ್ಪೆಲ್ಲವನ್ನೂ ಒಪ್ಪಿಕೊಂಡು ಪಶ್ಚಾತ್ತಾಪವನ್ನು ವ್ಯಕ್ತಪಡಿಸಿದ. ತನಗೂ ಲಿಂಗದೀಕ್ಷೆ ಕೊಡುವಂತೆ ಪ್ರಾರ್ಥಿಸಿದ. ಉರಿಲಿಂಗದೇವ ಸುಲಭವಾಗಿ ಒಪ್ಪಿಕೊಳ್ಳಲಿಲ್ಲ. ಕೆಲಕಾಲ ಆತನನ್ನು ಪರೀಕ್ಷಿಸಿದ. ಆತನ ನಿಷ್ಠೆಯನ್ನು ಮೆಚ್ಚಿದ. ಕಲ್ಲನ್ನು ಕೊಟ್ಟನೆಂದೂ ಅದೇ ಲಿಂಗವಾಯಿತೆಂದೂ ಕತೆ ಬರುತ್ತದೆ. ಆದರೆ ಕೊನೆಯಲ್ಲಿ ಪೆದ್ದಣ್ಣ ಮತ್ತು ಆತನ ಹೆಂಡತಿ ಕಾಳವ್ವೆ ಇಬ್ಬರೂ ಲಿಂಗದೀಕ್ಷೆ ಪಡೆದರೆಂಬುದು ಸ್ಪಷ್ಟ. ಆ ದಂಪತಿಗಳಲ್ಲಿ ಸುಪ್ತವಾಗಿದ್ದ ಯಾವ ಸಂಸ್ಕಾರವೋ ಜಾಗ್ರತವಾಗಿ ಇಬ್ಬರೂ ಒಳ್ಳೆಯ ಸಾಧಕರಾಗಿ ಸಾಧನೆಯಲ್ಲಿ ತುಂಬಾ ಮುಂದುವರಿದರು. ಮುಂದೆ ಉರಿಲಿಂಗದೇವ ತನ್ನ ಮಠಕ್ಕೆ ಉತ್ತರಾಧಿಕಾರಿಯನ್ನು ಆರಿಸುವ ಪ್ರಶ್ನೆ ಬಂದಾಗ, ಆತನ ದೃಷ್ಟಿ ಪೆದ್ದಣ್ಣನ ಕಡೆ ತಿರುಗುತ್ತದೆ. ಒಬ್ಬ ಅಸ್ಪೃಶ್ಯ ಗೃಹಸ್ಥನನ್ನು ಮಠಾಧೀಶನನ್ನಾಗಿ ಮಾಡಬಹುದೇ ಎಂಬ ಪ್ರಶ್ನೆ ಬರುತ್ತದೆ. ಯೋಗ್ಯತೆಯೊಂದನ್ನೇ ಒರೆಗಲ್ಲನ್ನಾಗಿಟ್ಟುಕೊಂಡಿರುವ ಶರಣ ಮಾರ್ಗಕ್ಕೆ ಇದಾವುದೂ ಅಡ್ಡಿ ಬರುವುದಿಲ್ಲ. ಆತ ಉರಿಲಿಂಗದೇವರ ಉತ್ತರಾಧಿಕಾರಿಯಾಗಿ ಉರಿಲಿಂಗಪೆದ್ದಿ ಎಂಬ ಹೆಸರಿನಿಂದ ಸ್ವಾಮಿಯಾಗುತ್ತಾನೆ. ಈ ಯುಗದಲ್ಲಿಯೂ ತಾತ್ವಿಕವಾಗಿ ಕೂಡ ಒಪ್ಪಲಾಗದ ಘಟನೆ ಆ ಕಾಲದಲ್ಲಿಯೇ ವಾಸ್ತವ ಸತ್ಯವಾಗಿ ನೆರವೇರಿ ಹೋಗುತ್ತದೆ, ಮುಂದೆ ಪ್ರತಿಗಾಮಿ ಶಕ್ತಿಗಳು ಆ ಮಠಕ್ಕೆ ಬೆಂಕಿ ಹಚ್ಚಿದರು ಇತ್ಯಾದಿ ಮಾತುಗಳು ಬರುತ್ತವೆ. ಅದೇನೇ ಇದ್ದರೂ ಶರಣರ ವಚನ ಚಳುವಳಿಯಿಂದಾದ ಸಾಮಾಜಿಕ ಕ್ರಾಂತಿಯ ಸ್ವರೂಪವೇನೆಂಬುದು ಇದರಿಂದ ಮನದಟ್ಟಾಗುತ್ತದೆ. ಇಷ್ಟಲಿಂಗ ಪರಿಕಲ್ಪನೆಯು ಸಾಮಾಜಿಕ ಸಮಾನತೆಗೆ ನಾಂದಿಹಾಡಿದ ಕೀರ್ತಿ ಉರಿಲಿಂಗಪೆದ್ದಿಗಳ ಈ ಘಟನೆಯಿಂದ ಸಾಧಿತವಾಯಿತು ಎಂಬುದನ್ನು ಗಮನಿಸಬೇಕು.

ಕೆಲವು ವರ್ಷಗಳ ಹಿಂದೆ ಚಿತ್ರದುರ್ಗ ಮುರುಘಾಮಠದ ಪೂಜ್ಯ ಡಾ. ಮುರುಘಾಶರಣರು 'ಮಂಸಾಹಾರಿಗಳಿಗೂ ಬಸವಧರ್ಮದಲ್ಲಿ ಪ್ರವೇಶವಿದೆ' ಎಂಬ ಹೇಳಿಕೆಯನ್ನು ನೀಡಿದಾಗ, ಇಡೀ ನಾಡಿನಲ್ಲಿ ಸಂಚಲನವನ್ನುಂಟಾಯಿತು. ಇದಕ್ಕೆ ಪೂರಕವಾದ ಒಂದು ಘಟನೆ ಮಹಾರಾಷ್ಟ್ರದಲ್ಲಿ ಜರುಗಿರುವುದು ಗಮನಿಸುವ ಅಂಶವಾಗಿದೆ.

ಪ್ರಾಚೀನ ಕನ್ನಡ ಸಂಸ್ಕೃತಿಯ ಬೇರುಗಳಿಂದ ಪೋಷಿತವಾದ ಮಹಾರಾಷ್ಟ್ರ ಆರ್ಯಾವರ್ತವಾದರೂ ದ್ರಾವಿಡ ಸಂಸ್ಕೃತಿಯ ಸಮನ್ವಯವನ್ನು ಕಾಪಾಡಿಕೊಂಡು ಬಂದಿರುವುದು ಗಮನಿಸಬೇಕಾದ ಅಂಶ. ಮಹಾರಾಷ್ಟ್ರದಲ್ಲಿ ಸುಮಾರು ೫೦ ಲಕ್ಷ ಲಿಂಗಾಯತ ಸಮುದಾಯ ಇದೆ. ವಿದರ್ಭ ಮಹಾರಾಷ್ಟ್ರದಲ್ಲಂತೂ ಪೂರ್ಣಪ್ರಮಾಣದ ಲಿಂಗಾಯತರಿದ್ದಾರೆ. ಆದರೆ ಕೊಲ್ಲಾಪುರ ಜಿಲ್ಲೆಯಲ್ಲಿ ಒಂದು ಸಮುದಾಯವಿದೆ. ಅವರನ್ನು "ತಿಳಿ ಆರ್ಯರು" ಎಂದು ಕರೆಯುತ್ತಾರೆ. ಅವರು ಲಿಂಗಾಯತ ಸಂಸ್ಕೃತಿಯನ್ನು ಅನುಕರಣೆ ಮಾಡುತ್ತಾರೆ. ಅವರ ಬಹಳಷ್ಟು ಆಚರಣೆಗಳೂ ಲಿಂಗಾಯತ ಆಚರಣೆಗಳೇ ಆಗಿವೆ.

ಕೊಲ್ಲಾಪೂರ ಸಂಸ್ಥಾನದ ಶಾಹೂ ಮಹಾರಾಜರು ಸುಮಾರು ೮ ದಶಕಗಳ



ಹಿಂದೆ ಇಡೀ ದೇಶದಲ್ಲಿ ಪ್ರಥಮ ಎನ್ನುವಂತೆ ಬ್ರಾಹ್ಮಣೇತರ ಚಳವಳಿಯ ಮುಂಚೂಣಿಯಲ್ಲಿದ್ದವರು. ಬ್ರಾಹ್ಮಣೇತರ ಚಳವಳಿಗೆ ಎಲ್ಲ ರೀತಿಯ ಸ್ಫೂರ್ತಿ–ಚೈತನ್ಯವನ್ನು ನೀಡಿದವರು. ಹೀಗಾಗಿ ಕರ್ನಾಟಕದಲ್ಲಿ ಅಂದು ಸರ್ ಸಿದ್ಧಪ್ಪ ಕಂಬಳಿ ಅವರಂಥ ಬ್ರಾಹ್ಮಣೇತರ ನಾಯಕರಿಗೂ ಅವರಿಗೂ ಹತ್ತಿರದ ಸಂಪರ್ಕ ಉಂಟಾಗಿತ್ತು. ಆಶ್ಚರ್ಯವೆಂದರೆ ೧೯೨೪ರಲ್ಲಿ ಮಹಾತ್ಮಗಾಂಧೀಜಿಯವರ ಅಧ್ಯಕ್ಷತೆಯಲ್ಲಿ ಜರುಗಿದ ಕಾಂಗ್ರೆಸ್ ಅಧಿವೇಶನ ಕಾಲಕ್ಕೆ ಬೆಳಗಾವಿಯಲ್ಲಿ ವಿವಿಧ ರೀತಿಯ ೨೦ ಅಧಿವೇಶನಗಳು ಜರುಗಿದವು. ಅವುಗಳಲ್ಲಿ ಬ್ರಾಹ್ಮಣೇತರ ಪರಿಷತ್ತಿನ ಅಧಿವೇಶನ ಕೂಡ ಒಂದು. ಅದರ ಅಧ್ಯಕ್ಷತೆಯನ್ನು ವಹಿಸಿದ್ದವರು ಸರ್ ಸಿದ್ಧಪ್ಪ ಕಂಬಳಿ. ಆದ್ದರಿಂದ ಶಾಹೂ ಮಹಾರಾಜರು ಮತ್ತು ಕಂಬಳಿಯವರು ಬ್ರಾಹ್ಮಣೇತರ ಚಳವಳಿಗೆ ಮುಂಬೈ ಪ್ರಾಂತ್ಯದಲ್ಲಿ ಬಹುದೊಡ್ಡ ನೇತಾರರಾಗಿದ್ದರು.

ಕಂಬಳಿಯವರ ಸ್ನೇಹ–ಸಂಪರ್ಕ ಹಾಗು ಕೊಲ್ಲಾಪುರದಲ್ಲಿ ಆಗಲೇ ಚಿತ್ರದುರ್ಗದ ಜಯದೇವ ಜಗದ್ಗುರುಗಳು ಒಂದು ಮಠವನ್ನು ಸ್ಥಾಪಿಸಿದ್ದರು. (ಈಗ ಅದು ಲಿಂಗಾಯತ ಬೋರ್ಡಿಂಗ್ ಎಂದು ಖ್ಯಾತವಾಗಿದೆ, ಅದು ಜಗದ್ಗುರುಗಳ ಖಾಸಾಮಠವೆಂದು ಖ್ಯಾತವಾಗಿತ್ತು) ಅದರ ಪ್ರಭಾವದಿಂದ ಶಾಹೂ ಮಹಾರಾಜರಿಗೆ ಲಿಂಗಾಯತ ಧರ್ಮದ ಬಗ್ಗೆ ಕುತೂಹಲ, ಆಸಕ್ತಿ ಉಂಟಾಯಿತು. ಜಯದೇವ ಜಗದ್ಗುರುಗಳವರ ಪ್ರೇರಣೆಯಿಂದ ಶಾಹೂ ಮಹಾರಾಜರು "ಲಿಂಗ" ಧಾರಣೆ ಮಾಡಿಕೊಳ್ಳಲು ಮನಸ್ಸು ಮಾಡಿದರು. ಲಿಂಗಧಾರಣೆ ದಿನಾಂಕವು ನಿಶ್ಚಿತವಾಗಿತ್ತು. ಇದರಿಂದ ಸಹಜವಾಗಿಯೇ ಅವರ ಸಾವಿರಾರು ಅಭಿಮಾನಿಗಳು ಲಿಂಗ ಕಟ್ಟಿಕೊಳ್ಳಲು ಸಿದ್ಧರಾದರು. ಎಲ್ಲ ಕಡೆಯೂ ವ್ಯಾಪಕ ಪ್ರಚಾರವಾಗಿತ್ತು. ಆದರೆ ಶಾಹೂ ಮಹಾರಾಜರ ಕೆಲವು ಹಿತೈಷಿಗಳು ಅವರಿಗೆ ಲಿಂಗ ಕಟ್ಟಿಕೊಳ್ಳದಂತೆ ಕಿವಿಮಾತು ಹೇಳಿದರು. "ನೀವು ಲಿಂಗ ಕಟ್ಟಿಕೊಂಡು ಲಿಂಗಾಯತರಾದರೆ, ಮಾಂಸ ತಿನ್ನುವಂತಿಲ್ಲ. ಮಾಂಸ ತಿನ್ನುವುದಾದರೆ ಲಿಂಗ ಕಟ್ಟಿಕೊಳ್ಳುವಂತಿಲ್ಲ. ಮಾಂಸಾಹಾರ ಸೇವನೆಯೇ ತಮ್ಮ ಮೂಲ ಆಹಾರ, ಅದನ್ನೇ ತಾವು ಬಿಟ್ಟರೆ ತಮ್ಮ ಕ್ಷಾತ್ರತೇಜ ಕಡಿಮೆಯಾಗಬಹುದು" ಎಂದೆಲ್ಲ ಹೇಳಿದಾಗ, ಶಾಹು ಮಹಾರಾಜರು ಲಿಂಗ ಕಟ್ಟಿಕೊಳ್ಳುವ ನಿರ್ಧಾರದಿಂದ ಹಿಂದೆ ಸರಿದರು.

ಆದರೆ ಅಷ್ಟರಲ್ಲಿ ನೂರಾರು ಗ್ರಾಮಗಳಿಗೆ ಮಹಾರಾಜರು ಲಿಂಗ ಕಟ್ಟಿಕೊಳ್ಳುವ ವಿಷಯ ತಿಳಿದಿತ್ತು ಮತ್ತು ಅವರೂ ಲಿಂಗ ಕಟ್ಟಿಕೊಳ್ಳಲು ತಯಾರಾಗಿದ್ದರು. ಹೀಗಾಗಿ ನಿಶ್ಚಿತವಾದ ದಿನಾಂಕದಂದು ಸಾವಿರಾರು ಮರಾಠಿಗರು ಲಿಂಗ ಕಟ್ಟಿಕೊಂಡರು. ಅಂದಿನಿಂದ ಅವರು ಮರಾಠಿ ಸಂಸ್ಕೃತಿಯಿಂದ ಹೊರಗಾದರು. ಅವರನ್ನು "ತಿಳಿ ಆರ್ಯರು" ಎಂದು ಉಳಿದವರು ಕರೆಯತೊಡಗಿದರು. ಅತ್ತ ಮರಾಠಿಗರು ಆಗದೆ, ಇತ್ತ ಲಿಂಗಾಯತರೂ ಆಗದೆ ಅಯೋಮಯ ಸ್ಥಿತಿಯಲ್ಲಿ ಅವರಿಂದು ಬದುಕುತ್ತಿದ್ದಾರೆ. ಮರಾಠಿಗರು ಅವರನ್ನು ಪೂರ್ಣಪ್ರಮಾಣದಲ್ಲಿ ಮರಾಠಿ ಸಂಸ್ಕೃತಿಯಲ್ಲಿ ಸೇರಿಸಿಕೊಳ್ಳುತ್ತಿಲ್ಲ. ಇತ್ತ ಲಿಂಗಾಯತರೂ ಅವರನ್ನು ತಮ್ಮ ಪ್ರವಾಹದಲ್ಲಿ ಸೇರಿಸಿಕೊಳ್ಳದೆ ದೂರಿಟ್ಟಿದ್ದಾರೆ. ಇಷ್ಟಾಗಿಯೂ ಒಂದು ವಿಶೇಷ ಸಂಗತಿಯೆಂದರೆ ಅವರು ಮಾಂಸಾಹಾರದಿಂದ ವಿಮುಖರಾಗಿದ್ದಾರೆ.

೧೯೬೬ರಲ್ಲಿ ನಾಗನೂರು ಶ್ರೀ ಶಿವಬಸವ ಸ್ವಾಮಿಗಳ ಕಲ್ಯಾಣ ಕೇಂದ್ರ, ಬೆಂಗಳೂರು

ಇವರ ಆಶ್ರಯದಲ್ಲಿ ಒಂದು ವಿಚಾರ ಸಂಕಿರಣ ಏರ್ಪಟ್ಟಿತ್ತು. ಈ ಸಂದರ್ಭದಲ್ಲಿ ಮಂಡನೆಯಾದ ಪ್ರಬಂಧಗಳನ್ನು ಡಾ.ಸಾ. ಶಿ. ಮರುಳಯ್ಯ ಅವರು ಸಂಪಾದಿಸಿ ಪ್ರಕಟಿಸಿದ್ದಾರೆ. ಈ ಕೃತಿಯಲ್ಲಿ ಗದುಗಿನ ಜಗದ್ಗುರು ಡಾ.ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳವರ ಆಶೀರ್ವಚನ ಪ್ರಕಟವಾಗಿದೆ. ಆ ಭಾಷಣದಲ್ಲಿ ಶ್ರೀಗಳು "ಲಿಂಗಾಯತ ಧರ್ಮ ಆಹಾರ ಸಂಸ್ಕೃತಿ ಕಾರಣವಾಗಿ ಇಂದು ಹಿಂದುಳಿದಿದೆ. ಹಿರಿಯ ಚಿಂತಕ ಡಾ. ದೇ. ಜವರೇಗೌಡ ಅವರು ಒಮ್ಮೆ ನಮ್ಮನ್ನು ಭೇಟಿಯಾಗಿ, ದಕ್ಷಿಣ ಕರ್ನಾಟಕದ ಲಕ್ಷಾಂತರ ಜನ ಲಿಂಗಾಯತ ಧರ್ಮ ಸ್ವೀಕರಿಸಲು ಸಿದ್ಧರಿದ್ದಾರೆ; ಆದರೆ ಅವರ ಆಹಾರ ಸಂಸ್ಕೃತಿಗೆ ತಾವು ಕಡಿವಾಣ ಹಾಕಬಾರದು, ಎಂದು ಹೇಳಿದರು. ಮಾಂಸಾಹಾರ ಸೇವನೆಗೆ ತಾವು ಒಪ್ಪಿಗೆ ನೀಡಿದರೆ, ಲಕ್ಷಾಂತರ ಜನ ಲಿಂಗಾಯತಧರ್ಮವನ್ನು ಸ್ವೀಕರಿಸಲು ತುದಿಗಾಲ ಮೇಲೆ ನಿಂತಿದ್ದಾರೆ' ಎಂದು ಹೇಳಿದಾಗ, ನಮ್ಮ ಸಮಾಜದ ಹಿರಿಯರು ಈ ಕುರಿತು ಗಂಭೀರವಾಗಿ ಆಲೋಚಿಸಬೇಕು" ಎಂದು ಮೂವತ್ತು ಮೂರು ವರುಷಗಳ ಹಿಂದೆ ಹೇಳಿದ ಮಾತುಗಳು ಇಂದಿಗೂ ಅಷ್ಟೇ ಪ್ರಸ್ತುತವಾಗಿವೆ ಎಂಬುದನ್ನು ಗಮನಿಸಬೇಕು.

ಇಂಥದೇ ಮತ್ತೊಂದು ಸಮಾಜ ಅಯೋಮಯವಾಗಿ ಕರ್ನಾಟಕದಲ್ಲಿ ಬದುಕುತ್ತಿದೆ. ಅದು ಕಲಬುರ್ಗಿ–ಬೀದರ ಜಿಲ್ಲೆಯ 'ಉರಿಲಿಂಗ ಪೆದ್ದಿ' ಸಮುದಾಯದ ಅಸ್ಪೃಶ್ಯ ಲಿಂಗಾಯತರು. ಡಾ. ಎಂ.ಎಂ.ಕಲಬುರ್ಗಿ ಅವರ ಮಾರ್ಗದರ್ಶನದಲ್ಲಿ ಡಾ.ಸಾವುಕಾರ ಕಾಂಬಳೆ ಅವರು ಈ ಸಮುದಾಯವನ್ನು ಕುರಿತು ಪಿಎಚ್.ಡಿ.ಸಂಶೋಧನೆ ಮಾಡಿದ್ದಾರೆ. 'ಅಸ್ಪೃಶ್ಯ ಲಿಂಗಾಯತರು: ಒಂದು ಅಧ್ಯಯನ' ಎಂಬ ಮಹಾಪ್ರಬಂಧ ಗದಗ ತೋಂಟದಾರ್ಯಮಠದಿಂದ ಪ್ರಕಟವಾಗಿದೆ. (ದ್ವಿತೀಯ ಮುದ್ರಣ ಚಿತ್ರದುರ್ಗ ಮುರುಘಾಮಠದ ಪೂಜ್ಯ ಡಾ. ಶಿವಮೂರ್ತಿ ಮುರುಘಾ ಶರಣರ ಪೀಠಾರೋಹಣ ರಜತ ಮಹೋತ್ಸವ ಸಮಿತಿಯಿಂದ ಪ್ರಕಟಗೊಂಡಿದೆ.) ಬೀದರ ಜಿಲ್ಲೆಯಲ್ಲಿ ಅನೇಕ ಉರಿಲಿಂಗಪೆದ್ದಿ ಸಂಪ್ರದಾಯದ ಮಠಗಳಿವೆ. ಆ ಮಠದ ಅನುಯಾಯಿಗಳು ಇತ್ತ ಪೂರ್ಣಪ್ರಮಾಣದಲ್ಲಿ ಲಿಂಗಾಯತರೂ ಆಗದೆ, ಅತ್ತ ಪೂರ್ಣ ದಲಿತರೂ ಆಗದೇ ಅಯೋಮಯ ಸ್ಥಿತಿಯಲ್ಲಿ ಬದುಕುತ್ತಿದ್ದಾರೆ ಎಂಬುದನ್ನು ಈ ಕೃತಿಯ ಸಂಶೋಧನೆಯಿಂದ ತಿಳಿಯಬಹುದಾಗಿದೆ.

ಬಸವಣ್ಣನವರ ತತ್ವಸಿದ್ಧಾಂತಗಳಿಗೆ ಮಾರು ಹೋದ ಕಲ್ಲಿನಾಥ ಶಾಸ್ತ್ರಿಗಳು, ವಚನಗಳಲ್ಲಿ ಅಡಗಿರುವ ನೀತಿತತ್ವಗಳನ್ನು ತಮ್ಮ ಬದುಕಿನಲ್ಲಿ ಅಕ್ಷರಶಃ ಅನುಷ್ಠಾನಕ್ಕೆ ತಂದವರಾಗಿದ್ದರು. ಬಸವಪುರಾಣವನ್ನು ದ್ಯಾಂಪುರದಲ್ಲಿ ನಡೆಸಿ ದೊಡ್ಡ ಕ್ರಾಂತಿಯನ್ನೇ ಮಾಡಿದ್ದರು. ಇದರಿಂದ ಪ್ರಭಾವಿತರಾಗಿ ಅವರು ಮಾಡಿದ ಇನ್ನೊಂದು ಕಾರ್ಯವೆಂದರೆ ಅಸ್ಪೃಶ್ಯತೆಯ ನಿವಾರಣೆಗಾಗಿ ಕೆಳವರ್ಗದ ಜನಸಮುದಾಯಕ್ಕೆ ಲಿಂಗದೀಕ್ಷೆಯನ್ನು ನೀಡಿದರು. ಲಿಂಗಾಯತೇತರರಿಗೆ ಲಿಂಗದೀಕ್ಷೆ ಮಾಡಿದ ಪ್ರಕರಣ ದೊಡ್ಡ ಕೋಲಾಹಲವನ್ನೇ ಸೃಷ್ಟಿಸಿತು. ಶಾಸ್ತ್ರಿಗಳಿಗೆ ಆತ್ಮೀಯರಾದವರು ಅವರ ವಿರೋಧಿಗಳಾದರು. ಲಿಂಗಾಯತ ಸಮಾಜದವರು ಈ ಕೆಳವರ್ಗದ ಹೊಸ ಲಿಂಗಾಯತರೊಂದಿಗೆ ಬೆರೆತುಕೊಂಡರು. ಆದರೆ 'ಉಂಬಲ್ಲಿ ಉಡುವಲ್ಲಿ ಕುಲವಳಿಯಿತ್ತೆಂಬ, ಕೊಂಬಲ್ಲಿ ಕೊಡುವಲ್ಲಿ ಕುಲವನರಸುವ' ಪ್ರವೃತ್ತಿ ಹೋಗಲಿಲ್ಲ. ಇದರಿಂದ



ಕಲ್ಲಿನಾಥ ಶಾಸ್ತ್ರಿಗಳು ತುಂಬ ಗಂಭೀರವಾಗಿ ಆಲೋಚಿಸಿದರು. ಈ ಹೊಸ ಬಸವ ಭಕ್ತರನ್ನು ಲಿಂಗಾಯತರು ಒಪ್ಪಿಕೊಳ್ಳದಿದ್ದರೆ ಅವರು ಈ ಧರ್ಮ ಸೇರಿ ಏನು ಪ್ರಯೋಜನ? ಧರ್ಮಸ್ವೀಕಾರ ಸುಲಭ; ಆಚರಣೆ ತುಂಬ ಕಷ್ಟ. ಅನ್ನೋದಕಗಳನ್ನು ಮಾಡುವಂತೆ, ಶರೀರ ಸಂಬಂಧ ಮಾಡುವರೇ? ಎಂದು ಆಲೋಚಿಸಿ ಲಿಂಗದೀಕ್ಷಾ ಕಾರ್ಯವನ್ನು ನಿಲ್ಲಿಸಿಬಿಟ್ಟರು.

ಮುಧೋಳ ಮೃತ್ಯುಂಜಯ ಸ್ವಾಮಿಗಳ ಪಟ್ಟಾಭಿಷೇಕ ಕಾರ್ಯಕ್ರಮಕ್ಕೆ ಶಿ.ಶಿ. ಬಸವನಾಳರು, ಬುದ್ಧಯ್ಯ ಪುರಾಣಿಕರು ಮತ್ತು ಉತ್ತಂಗಿ ಚನ್ನಪ್ಪನವರು ಹೋಗಿದ್ದರು. ಪಟ್ಟಾಭಿಷೇಕ ಸಮಾರಂಭವನ್ನು ತುಂಬ ಹತ್ತಿರದಿಂದ ಉತ್ತಂಗಿಯವರು ಗಮನಿಸುತ್ತಾರೆ. ೬೦ ವರುಷದ ಹಿರಿಯ ಸ್ವಾಮಿಗಳು, ೨೫ ವರುಷದ ಯುವಕ ಮೃತ್ಯುಂಜಯ ಸ್ವಾಮಿಗಳವರಿಗೆ ಸಾಷ್ಟಾಂಗ ನಮಸ್ಕಾರ ಹಾಕುತ್ತಾರೆ. ಈ ಘಟನೆಯನ್ನು ಕಂಡ ಉತ್ತಂಗಿಯವರು ಹೀಗೆ ಹೇಳುತ್ತಾರೆ– 'ಲಿಂಗಾಯತ ಧರ್ಮದಲ್ಲಿ ಜ್ಯೋತಿಮುಟ್ಟಿ ಜ್ಯೋತಿಯಾದಂತೆ, ಗುರುಮುಟ್ಟಿ ಗುರುವಾದ ಪ್ರಕ್ರಿಯೆಯ ಸಾಮಾಜಿಕ ಸಮಾನತೆಯನ್ನು ಕಂಡೆವು. ಏಸುಕ್ರಿಸ್ತನು ತನ್ನ ಶಿಷ್ಯರ ಪಾದಪೂಜೆ ಮಾಡಿದಂತೆ, ಇಲ್ಲಿ ಗುರುವಾದವನು ಅಹಂಕಾರ ನಿರಸನಕ್ಕಾಗಿ ಶಿಷ್ಯನಿಗೆ ನಮಸ್ಕರಿಸುವ ಪದ್ಧತಿ ಲಿಂಗಾಯತ ಧರ್ಮದ ವೈಶಿಷ್ಟ್ಯವಾಗಿದೆ.

ಅಂದು ಪಟ್ಟಾಭಿಷೇಕ ಮುಕ್ತಾಯವಾದ ನಂತರ ಮಠದಲ್ಲಿಯೇ ಉಳಿದುಕೊಳ್ಳುವ ಪ್ರಸಂಗ ಬರುತ್ತದೆ. ಊಟ ಸಮಯದಲ್ಲಿ ಬಸವನಾಳ, ಪುರಾಣಿಕರ ಮೊದಲಾದ ಲಿಂಗಾಯತ ಪ್ರತಿಷ್ಠರು ಮಠದ ಪ್ರಸಾದ ಕೋಣೆಯಲ್ಲಿ ಕುಳಿತುಕೊಳ್ಳುತ್ತಾರೆ. ಉತ್ತಂಗಿ ಚನ್ನಪ್ಪನವರನ್ನು ಹೊರಗೆ ಕೂಡ್ರಿಸುತ್ತಾರೆ. ಉತ್ತಂಗಿಯವರು ಊಟ ಮಾಡಿ ಹೊರಗೆ ಬಂದು ನಿಂತಾಗ, ಬುದ್ಧಯ್ಯ ಪುರಾಣಿಕರು ಊಟ ಮುಗಿಸಿ, ಹೊರಗೆ ನಿಂತಿದ್ದ ಉತ್ತಂಗಿಯವರನ್ನು ಕುರಿತು– 'ನಾವು ಒಳಗೆ ಪ್ರಸಾದ ಮಾಡುವಾಗ, ಲಿಂಗಾಯತ ಧರ್ಮದ ಪ್ರಕಾರ, ಹರ ಹರ ಮಹಾದೇವ ಎಂದೆವು; ಕ್ರೈಸ್ತರಾದ ನೀವು ಯಾವ ಮಂತ್ರ ಪಠಿಸಿದಿರಿ?' ಎಂದು ಕೇಳುತ್ತಾರೆ. ಅದಕ್ಕೆ ಉತ್ತಂಗಿಯವರು 'ಮರಾ ಮರಾ ಮಹಾದೇವ' ಎಂದೆ ಎನ್ನುತ್ತಾರೆ. ಈ ಮಾತು ಕೇಳಿ, ಬಸವನಾಳರ– ಪುರಾಣಿಕರ ಮುಖ ಕಪ್ಪಾಗುತ್ತವೆ. ಈ ಪಂಕ್ತಿಭೇದದ ಘಟನೆ ಬನಹಟ್ಟಿಯಲ್ಲಿದ್ದ ಲಾತೂರೆ, ಸಾಬೋಜಿ, ಅಬಕಾರ ಮತ್ತು ಎಸ್. ಎಂ.ಅಂಗಡಿ ಅವರಿಗೆ ಗೊತ್ತಾಗುತ್ತದೆ. ಅವರು ಬುದ್ಧಯ್ಯ ಪುರಾಣಿಕರ ಹತ್ತಿರ ಬಂದು, ನಿನ್ನೆ ಉತ್ತಂಗಿಯವರಂಥ ಶ್ರೇಷ್ಠ ವಿದ್ವಾಂಸರನ್ನು ಊಟದ ಸಮಯದಲ್ಲಿ ಅವರು ಲಿಂಗ ಕಟ್ಟಿಲ್ಲ ಎಂಬ ಕಾರಣಕ್ಕೆ ಹೊರಗೆ ಕೂಡ್ರಿಸಿ ಊಟ ನೀಡಿದರಂತೆ, ಇದನ್ನು ನಾವು ಪ್ರತಿಭಟಿಸುತ್ತೇವೆ ಎನ್ನುತ್ತಾರೆ. ಆಗ ಬುದ್ಧಯ್ಯನವರು, ಬಸವನಾಳರು ಉತ್ತಂಗಿಯವರನ್ನು ತಮ್ಮೊಂದಿಗೆ ಮಠದ ಪ್ರಸಾದ ಕೋಣೆಗೆ ಕರೆದುಕೊಂಡು ಹೋಗಿ ಊಟ ಮಾಡುತ್ತಾರೆ. ಆಗ ಉತ್ತಂಗಿಯವರು ಪಂಕ್ತಿಭೇದ ನಿವಾರಣೆಯಾಯಿತು ಎಂದು ಸಂತೋಷಪಡುತ್ತಾರೆ.

ಧಾರವಾಡ ಮುರುಘಾಮಠದ ಮೃತ್ಯುಂಜಯ ಅಪ್ಪಗಳು ಉತ್ತಂಗಿಯವರನ್ನು ಎಷ್ಟು ಗೌರವದಿಂದ ಕಾಣುತ್ತಿದ್ದರು ಎಂದರೆ, ಉತ್ತಂಗಿಯವರು ಮಠಕ್ಕೆ ಬಂದಾಗ, ಸ್ವತಃ

ಮೃತ್ಯುಂಜಯಪ್ಪಗಳು ಚಾಪೆ ಹಾಸಿ, ತಮ್ಮ ದಿಂಬನ್ನು ಅವರಿಗೆ ಆಸರೆಗೆ ಕೊಟ್ಟು, ತಾವು ಗೋಡೆಗೆ ಒರಗಿ ಕೂಡ್ರುತ್ತಿದ್ದರು. ಕಪಟರಾಳ ಕೃಷ್ಣರಾಯರಂಥ ವಿದ್ವಾಂಸರು ಅನುಭವ ಮಂಟಪವೇ ಇರಲಿಲ್ಲ; ಅದೊಂದು ಸುಳ್ಳಿನ ಕಂಥೆ ಎಂದು ಹೇಳಿದಾಗ, 'ಅನುಭವ ಮಂಟಪ'ದ ಐತಿಹಾಸಿಕತೆ ಎಂಬ ಸಂಶೋಧನಾತ್ಮಕ ಕೃತಿಯನ್ನು ಬರೆದವರು ಉತ್ತಂಗಿಯವರು, ಸಿದ್ಧರಾಮನು ಲಿಂಗಾಯತನಲ್ಲ ಆತ ಶೈವ ಎಂದು ಡಿ.ಎಲ್.ಎನ್. ಅವರು ಹೇಳಿದಾಗ, ಸಿದ್ಧರಾಮನು ಶಿವಯೋಗಿ ಮೇಲಾಗಿ ಶೂನ್ಯಪೀಠದ ಅಧ್ಯಕ್ಷನೂ ಆಗಿದ್ದನೆಂದು ಸಂಶೋಧಿಸಿ, 'ಸಿದ್ಧರಾಮ ಸಾಹಿತ್ಯ ಸಂಗ್ರಹ' ಪ್ರಕಟಿಸಿದವರು ಉತ್ತಂಗಿಯವರು. ಯಾವ ಲಿಂಗಾಯತ ವಿದ್ವಾಂಸರೂ ಈ ನಿಟ್ಟಿನಲ್ಲಿ ಕೆಲಸ ಮಾಡದ ಸಂದರ್ಭದಲ್ಲಿ ಉತ್ತಂಗಿಯವರು ಮಾಡಿದ ಈ ಸಂಶೋಧನೆ ಮೃತ್ಯುಂಜಯಪ್ಪಗಳ ಮನಸ್ಸಿನ ಆಳದಲ್ಲಿ ಬೇರೂರಿತ್ತು. ಆ ಕಾರಣಕ್ಕಾಗಿ ಅವರನ್ನು ತುಂಬ ಗೌರವದಿಂದ ಕಾಣುತ್ತಿದ್ದರು. ಇಂಥ ಉತ್ತಂಗಿಯವರಿಗೆ ಮುಧೋಳ ವಿರಕ್ತಮಠದಲ್ಲಿ ಲಿಂಗ ಇಲ್ಲ ಎಂಬ ಕಾರಣಕ್ಕಾಗಿ ಅವಮಾನ ಆಗಿದ್ದು ವಿಷಾದ ಪಡುವ ಸಂಗತಿಯಾಗಿದೆ.

ಆರ್ಯಸಮಾಜದ ಪ್ರಚಾರಕರಾಗಿದ್ದ ಬನ್ಸೀಲಾಲ ಅವರು ಒಂದು ಸಾರ್ವಜನಿಕ ಭಾಷಣದಲ್ಲಿ 'ಒಂದು ವರುಷದ ಅವಧಿಯೊಳಗೆ ಒಂದು ಸಾವಿರ ಲಿಂಗಗಳನ್ನು ತೆಗೆಸಿ ಅವರಿಗೆ ಯಜ್ಞೋಪವೀತ ತೊಡಿಸುವೆ' ಎಂದು ಪ್ರತಿಜ್ಞೆ ಮಾಡಿದ್ದರು.

ಮಹರ್ಷಿ ದಯಾನಂದ ಸರಸ್ವತಿ ಅವರು ಆರ್ಯ ಸಮಾಜವನ್ನು ಸ್ಥಾಪಿಸಿದ ಉದ್ದೇಶ– ಅನಿವಾರ್ಯ ಕಾರಣಗಳಿಂದ ಪರಧರ್ಮಕ್ಕೆ ಮತಾಂತರವಾದ ಹಿಂದೂಗಳನ್ನು ಮತ್ತೆ ಹಿಂದೂಧರ್ಮಕ್ಕೆ ಬರುವಂತೆ ಮಾಡಲು ದೀಕ್ಷೆ ನೀಡುವುದಾಗಿತ್ತು. ಆರ್ಯ ಸಮಾಜದ ಮೂಲ ಉದ್ದೇಶಕ್ಕೆ ಪೂರಕವಾಗಿ ಹೈದರಾಬಾದ ಸಂಸ್ಥಾನದಲ್ಲಿ ಲಿಂಗಾಯತರು ಕೈಜೋಡಿಸಿದ್ದರು. ಉದಗೀರದ ಸಂಗ್ರಾಮಪ್ಪ, ಶಂಕರರಾವ್, ಪ್ರಭುರಾವ್ ಮೊದಲಾದ ಲಿಂಗಾಯತ ಸಮಾಜದ ಮುಖಂಡರು ಆರ್ಯಸಮಾಜದ ತತ್ವಗಳನ್ನು ಸಮಾಜದಲ್ಲಿ ತಿಳಿಸಿಹೇಳುವ ಪ್ರಯತ್ನ ಮಾಡುತ್ತಿದ್ದರು. ಆದರೆ ಬನ್ಸೀಲಾಲರಂಥ ಅಜ್ಞರು ಲಿಂಗಾಯತರನ್ನೇ ಆರ್ಯಸಮಾಜಿಗಳನ್ನಾಗಿ ಮಾಡತೊಡಗಿದರು. ಇದನ್ನು ಉದ್ಗೀರದ ಸಂಗ್ರಾಮಪ್ಪನವರು ಉಗ್ರವಾಗಿ ಖಂಡಿಸಿದರು. ಪರಧರ್ಮಗಳಿಗೆ ಹೋದ ಹಿಂದೂಗಳನ್ನು ಮರಳಿ ತರುವುದಕ್ಕೆ ಇರಬೇಕೆ ಹೊರತು ಆರ್ಯ ಸಮಾಜವೊಂದು ಜಾತಿಯಾಗಿ ಪರಿಣಮಿಸಬಾರದೆಂದು ಅವರು ಹೇಳಿದರು. ಅದಕ್ಕೆ ಪ್ರತಿಯಾಗಿ ಬನ್ಸೀಲಾಲ್ ಒಂದು ಸಾವಿರ ಲಿಂಗ ತೆಗೆಯುವ ಪ್ರತಿಜ್ಞೆ ಮಾಡಿದ. ಈ ವಿಷಯ ತಿಳಿದ ಹರ್ಡೇಕರ ಮಂಜಪ್ಪನವರು ಆಲಮಟ್ಟಿಯಿಂದ ಕಲಬುರ್ಗಿಗೆ ಬಂದು ಪ್ರತಿಭಟನೆ ಮಾಡಿದರು.ಈ ಪ್ರತಿಭಟನೆಯಲ್ಲಿ ಸಿದ್ಧಯ್ಯನವರು ಪಾಲ್ಗೊಂಡರು. ಉಗ್ರ ಪ್ರತಿಭಟನೆಗೆ ಕಲಬುರ್ಗಿ, ಬೀದರ, ರಾಯಚೂರು ಜಿಲ್ಲೆಯ ಜನ ಎಚ್ಚೆತ್ತರು. ಬನ್ಸೀಲಾಲರಿಗೆ ಒಂದು ಸಾವಿರ ಅಲ್ಲ, ಒಂದು ಲಿಂಗವನ್ನೂ ತೆಗೆಯಲು ಸಾಧ್ಯವಾಗಲಿಲ್ಲ. ಲಿಂಗಾಯತರ ಜಾಗೃತಿಗಾಗಿ ಒಂದು ಸಮ್ಮೇಳನ ಮಾಡಬೇಕೆಂದು ಸಂಗ್ರಾಮಪ್ಪನವರು ಆಲೋಚಿಸಿದರು. ಕಲಬುರ್ಗಿಯಲ್ಲಿ ಸಮ್ಮೇಳನ ಅತ್ಯಂತ ವಿಜೃಂಭಣೆಯಿಂದ ಜರುಗಿತು. ಹರ್ಡೇಕರ ಮಂಜಪ್ಪನವರು ಈ ಸಮ್ಮೇಳನದ



ಜೀವನಾಡಿಗಳಾಗಿದ್ದರು. ವೇದಿಕೆ ಮೇಲೆ ಕಲಬುರ್ಗಿ ಭಾಗದ ಮುಖಂಡರೂ ಭಾಷಣ ಮಾಡಿದರು. ಸಮ್ಮೇಳನ ಮುಗಿದ ನಂತರ ಎಲ್ಲರೂ ಉದಗೀರದಿಂದ ಕಲ್ಯಾಣದವರೆಗೆ 'ವಿಜಯಯಾತ್ರೆ' ಮಾಡಿದರು. ಈ ಸಂದರ್ಭದಲ್ಲಿ ಇಷ್ಟಲಿಂಗದ ಸಾಮಾಜಿಕ ಆಯಾಮವನ್ನು ಜನಮನಕ್ಕೆ ಮಂಜಪ್ಪನವರು ಮನದಟ್ಟು ಮಾಡಿಕೊಟ್ಟರು.

ಹರ್ಡೇಕರ ಮಂಜಪ್ಪನವರು ಲಿಂಗದೀಕ್ಷೆ ಪಡೆಯಲು ಎಷ್ಟೆಲ್ಲ ಕಷ್ಟಪಡಬೇಕಾಯಿತು ಎಂಬುದನ್ನು ಕೇಳಿದರೆ ಆಶ್ಚರ್ಯವಾಗುತ್ತದೆ. ಧಾರವಾಡ ಮುರುಘಾಮಠದ ಮೃತ್ಯುಂಜಯಪ್ಪಗಳು ಮಂಜಪ್ಪನವರಿಗೆ ಲಿಂಗದೀಕ್ಷೆ ನೀಡಬೇಕೆಂದು ಪ್ರಯತ್ನಿಸಿದರು. ಆದರೆ ಸಂಪ್ರದಾಯ ಬದ್ಧ ಲಿಂಗಾಯತ ಸಮಾಜ ಮಂಜಪ್ಪನವರಿಗೆ ಲಿಂಗದೀಕ್ಷೆ ನೀಡಲು ಒಪ್ಪಲಿಲ್ಲ. ಕೊನೆಗೆ ಮೃತ್ಯುಂಜಯಪ್ಪಗಳು ಮಂಜಪ್ಪನವರನ್ನು ಅಥಣಿ ಮುರುಘೇಂದ್ರ ಶಿವಯೋಗಿಗಳ ಹತ್ತಿರ ಕರೆದುಕೊಂಡು ಹೋಗುತ್ತಾರೆ. ಮುರುಘೇಂದ್ರ ಶಿವಯೋಗಿಗಳವರು ಬಸವಣ್ಣನವರ ವಚನಗಳನ್ನು ಅತ್ಯಂತ ಭಕ್ತಿಯಿಂದ ಪ್ರತಿನಿತ್ಯ ಪಠಣ ಮಾಡುತ್ತಿರುತ್ತಾರೆ. ಬಸವಣ್ಣನವರ ತತ್ವಗಳನ್ನು ಮುರುಘೇಂದ್ರ ಶಿವಯೋಗಿಗಳು ಅಕ್ಷರಶಃ ಅನುಷ್ಠಾನಕ್ಕೆ ತಂದವರು. ಪೂಜ್ಯ ಶಿವಯೋಗಿಗಳನ್ನು ಮಂಜಪ್ಪನವರು – 'ಬುದ್ಧಿ ತಿಪ್ಪೆಯಲ್ಲಿ ಬೆಳೆದ ಪತ್ರಿ ಯೋಗ್ಯವೋ ಅಯೋಗ್ಯವೋ?' ಎಂದು ಪ್ರಶ್ನಿಸುತ್ತಾರೆ. ಪತ್ರಿ ಪವಿತ್ರವಾದುದು, ಅದು ತಿಪ್ಪೆಯಲ್ಲಿ ಹುಟ್ಟಲಿ, ಮತ್ತೆಲ್ಲಿಯಾದರೂ ಹುಟ್ಟಲಿ, ಅದರ ಪಾವಿತ್ರ್ಯತೆಗೆ ಭಂಗವಿಲ್ಲ ಎಂದು ಶಿವಯೋಗಿಗಳು ಹೇಳುತ್ತಾರೆ. ಆಗ ಮಂಜಪ್ಪನವರು– 'ದಾಸಿ ಪುತ್ರನಾಗಲಿ, ವೇಶ್ಯಾ ಪುತ್ರನಾಗಲಿ ಶಿವದೀಕ್ಷೆಯಾದ ಬಳಿಕ ಸಾಕ್ಷಾತ್ ಶಿವನೆಂದು ಭಾವಿಸಬೇಕು' ಎಂದು ಅಣ್ಣ ಬಸವಣ್ಣನವರು ಹೇಳಿದ್ದಾರೆ. ಅದರಂತೆ, ಲಿಂಗಾಯತನಲ್ಲದ ನನಗೆ ತಾವು ಲಿಂಗದೀಕ್ಷೆ ನೀಡಬೇಕೆಂದು ವಿನಂತಿಸುತ್ತಾರೆ. ಮುರುಘೇಂದ್ರ ಶಿವಯೋಗಿಗಳು ಮಧ್ಯರಾತ್ರಿಯಲ್ಲಿ ಮಂಜಪ್ಪನವರಿಗೆ 'ಇಷ್ಟಲಿಂಗ ದೀಕ್ಷೆ' ನೀಡುತ್ತಾರೆ. ಈ ಘಟನೆ, ಆಧುನಿಕ ಕರ್ನಾಟಕದಲ್ಲಿ ಲಿಂಗಾಯತರು ಎಷ್ಟು ಸಂಪ್ರದಾಯವಾದಿಗಳಾಗಿ, ಸಾಮಾಜಿಕ ಮೌಲ್ಯಗಳನ್ನು ಗಾಳಿಗೆ ತೂರಿದ್ದರು ಎಂಬುದು ತಿಳಿದು ಬರುತ್ತದೆ.

ಸಜ್ಜಲಗುಡ್ಡದ ಶರಣಮ್ಮನವರ ನಮ್ಮ ನಡುವೆ ಬದುಕಿ ಹೋದ ಪ್ರಾತಃಸ್ಮರಣೀಯ ಅನುಭಾವಿಗಳು. ಅವರು ಹಾಲುಮತ ಮನೆತನದವರು. ಆದರೆ ಶರಣಮ್ಮನವರಿಗೆ ಲಿಂಗದೀಕ್ಷೆ ಪಡೆಯಬೇಕೆಂಬ ಹಂಬಲ. ಆದರೆ ಯಾವ ಸ್ವಾಮಿಗಳು ಲಿಂಗದೀಕ್ಷೆ ಮಾಡಲು ಮುಂದೆ ಬರುವುದಿಲ್ಲ. ಸಮಾಜದ ಹಿರಿಯರು ಆ ಸ್ವಾಮಿಗಳಿಗೆ ನೀವು ಲಿಂಗದೀಕ್ಷೆ ನೀಡಿದರೆ ನಿಮಗೆ ಸಾಮಾಜಿಕ ಬಹಿಷ್ಕಾರ ಹಾಕುತ್ತೇವೆ ಎಂದು ಬೆದರಿಕೆಯೊಡ್ಡುತ್ತಾರೆ. ಕೊನೆಗೆ ಗುಡದೂರು ಬಸವಾರ್ಯರು ಶರಣಮ್ಮನವರಿಗೆ ಲಿಂಗದೀಕ್ಷೆ ದಯಪಾಲಿಸುತ್ತಾರೆ. ಮೂರು ವರುಷಗಳ ಕಾಲ ಶರಣಮ್ಮನವರು ಲಿಂಗವನ್ನು ಗುಪ್ತವಾಗಿಟ್ಟುಕೊಂಡು ಪೂಜೆ ಮಾಡಬೇಕಾದ ಪರಿಸ್ಥಿತಿ ನಿರ್ಮಾಣವಾಗುತ್ತದೆ. ಲಿಂಗಾಂಗ ಯೋಗದಲ್ಲಿ ತಲ್ಲೀನರಾದ ಶರಣಮ್ಮನವರು ತಮ್ಮ ಲಿಂಗಪೂಜೆ, ಧ್ಯಾನ, ತಪಸ್ಸುಗಳಿಂದ ಶಿವಯೋಗದ ಉತ್ತುಂಗಕ್ಕೇರಿದಾಗ ಇಡೀ ಸಮಾಜವೇ ಅವರಿಗೆ ಶರಣು ಹೋಯಿತು. ಆದರೆ ಪ್ರಾರಂಭದ ಘಟ್ಟದಲ್ಲಿ ಅವರು ಅನುಭವಿಸಿದ ನೋವು, ಸಂಕಟ ವರ್ಣನಾತೀತ.

೧೯ನೇ ಶತಮಾನದ ಪೂರ್ವಾರ್ಧದಲ್ಲಿ ಕಲಬುರ್ಗಿ ಜಿಲ್ಲೆಯ ಕಡಕೋಳ ಗ್ರಾಮದ ಮಡಿವಾಳಪ್ಪನವರು ಮಹಾ ಅನುಭಾವಿಗಳು. ಅವರು ಮಡಿವಾಪ್ಪನವರ ತಾಯಿ ಗಂಗಮ್ಮ. ತಂದೆ ಬಿದನೂರಿನ ಹಿರೇಮಠದ ಒಡೆಯ ವಿರೂಪಾಕ್ಷಸ್ವಾಮಿ. ಅನಾಥಳಾದ ವಿಧವೆ ಗಂಗಮ್ಮ, ವಿರೂಪಾಕ್ಷಸ್ವಾಮಿಯ ಸೇವೆಮಾಡಿಕೊಂಡು ಮಠದಲ್ಲಿದ್ದಾಗ ಇವಳಿಗೆ ಮಡಿವಾಳಪ್ಪ ಹುಟ್ಟಿದ್ದು. ಬಿದನೂರ ಮಲ್ಲಿಕಾರ್ಜುನಪ್ಪಗೌಡರೇ ಮಡಿವಾಳಪ್ಪನನ್ನು ಎತ್ತಿ ಆಡಿಸಿ ಬೆಳೆಯಿಸಿದ್ದು; ಆಶ್ರಯನೀಡಿ ಮಗಳ ಮಗನಂತೆ ಮಡಿವಾಳ ಮೊಮ್ಮಗನನ್ನು ಜೋಪಾನ ಮಾಡಿದ್ದು. ಇಲ್ಲಿ ಗಂಗಮ್ಮ ಮತ್ತು ವಿರೂಪಾಕ್ಷಸ್ವಾಮಿ ಇವರ ಸಂಬಂಧ ಅನೀತಿಯಿಂದ ಕೂಡಿದ್ದು ಎಂದು ಜನವದಂತಿ. ಇದಕ್ಕೆ ಆಧಾರವಾಗಿ ಕೆಲವರು ಗಂಗಮ್ಮ ಸ್ವತಃ ಹಾಡು ರಚಿಸಿದ್ದಾಳೆಂದು ತಿಳಿದು, "ಜಾರತನವ ನಾ ಮಾಡಿದೆ ನಮ್ಮ ಜಂಗಮನೊಡಗೂಡಿ । ಹಾದಿ ತಿಳಿಯದೆ ಗಾದಿಯನಾಡುವರು । ವಾದ ಕರ್ತದಿಂದೆ॥" ಎಂಬ ಹಾಡನ್ನು ಉಲ್ಲೇಖಿಸುತ್ತಾರೆ. ಮಡಿವಾಳಪ್ಪನವರು ಲಿಂಗದೀಕ್ಷೆಯನ್ನು ಪಡೆಯಬೇಕೆಂದು ಹಂಬಲಿಸುತ್ತಾರೆ. ಆದರೆ ಪ್ಯಾಟಿ ಬಸಯ್ಯನಂತಹ ಸಂಪ್ರದಾಯವಾದಿಗಳು ಅದನ್ನು ಪ್ರಬಲವಾಗಿ ವಿರೋಧಿಸುತ್ತಾರೆ. ಆಗ ಮಡಿವಾಳಪ್ಪನವರು ಕಲಬುರ್ಗಿ ಶರಣಬಸವೇಶ್ವರರ ಹತ್ತಿರ ಬರುತ್ತಾರೆ. ಆಗ ಶರಣಬಸವೇಶ್ವರರು ಅರಳಗುಂಡಿಗೆಯಲ್ಲಿ ವಾಸವಾಗಿರುತ್ತಾರೆ. ಆಗ ಪ್ಯಾಟಿ ಬಸಯ್ಯನಂತವರು ಇಂಥವರಿಗೆ ಲಿಂಗದೀಕ್ಷೆ ಕೊಡಿಸಿದರೆ ನಿಮಗೂ ಸಾಮಾಜಿಕ ಬಹಿಷ್ಕಾರ ಹಾಕುತ್ತೇವೆ ಎಂದು ಶರಣಬಸವೇಶ್ವರರನ್ನೇ ಹೆದರಿಸುತ್ತಾನೆ. ಆದರೆ ಶರಣಬಸವೇಶ್ವರರು ಯಾವುದಕ್ಕೂ ಅಂಜದೆ ಅಳುಕದೆ, ಕಲಕೇರಿಯ ಮರುಳಾರಾಧ್ಯರಿಂದ ಮಡಿವಾಳಪ್ಪನವರಿಗೆ ಲಿಂಗದೀಕ್ಷೆಯನ್ನು ಕೊಡಿಸುತ್ತಾರೆ. ಮಡಿವಾಳಪ್ಪನವರು ತತ್ವಪದಗಳನ್ನು ರಚಿಸಿ, ನಮ್ಮ ನಾಡಿನ ಶ್ರೇಷ್ಠ ಅನುಭಾವಿಗಳಲ್ಲಿ ಒಬ್ಬರಾಗಿ ಲೋಕಕ್ಕೆ ಚಿರಪರಿಚಿತರಾದುದು ಈಗ ಇತಿಹಾಸ.

ಜಯದೇವ ಜಗದ್ಗುರುಗಳು ೧೯೦೪ರಲ್ಲಿ ಮುರುಘಾಮಠದ ಅಧಿಪತಿಗಳಾಗುತ್ತಾರೆ. ಪೀಠಕ್ಕೆ ದಯಮಾಡಿಸಿದ ಕೆಲವು ದಿನಗಳಲ್ಲಿ ಜಯದೇವ ಜಗದ್ಗುರುಗಳು ತಮ್ಮನ್ನು ಈ ಪೀಠಕ್ಕೆ ಆಯ್ಕೆ ಮಾಡುವಲ್ಲಿ ಪರಿಶ್ರಮಿಸಿದ ವಾರದ ಮಲ್ಲಪ್ಪನವರಿಗೆ 'ಭಕ್ತರ ಸಹಾಯದಿಂದ ಮಠದ ಕಟ್ಟಡವನ್ನು ಜೀರ್ಣೋದ್ಧಾರ ಮಾಡುತ್ತಿರುವೆ, ಮಠಕ್ಕೆ ಮಹಾದ್ವಾರ ಕಟ್ಟಿಸುತ್ತಿರುವೆ' ಎಂದು ಅಭಿಮಾನದಿಂದ ಪತ್ರ ಬರೆಯುತ್ತಾರೆ. ಆ ಪತ್ರವನ್ನು ಓದಿದ ವಾರದ ಮಲ್ಲಪ್ಪನವರು ಜಗದ್ಗುರುಗಳಿಗೆ ಮರಳಿ ಪತ್ರವೊಂದನ್ನು ಬರೆಯುತ್ತಾರೆ. ಅದರಲ್ಲಿ 'ಪೂಜ್ಯಶ್ರೀ ಜಯದೇವ ಜಗದ್ಗುರುಗಳ ಸನ್ನಿಧಿಗೆ ಅನಂತ ಪ್ರಣಾಮಗಳು. ನಿಮ್ಮ ಪತ್ರಕ್ಕೆ ಏನು ಉತ್ತರ ಕೊಡಲಿ ಎಂದು ಯೋಚಿಸಿದೆ. ಈಗ ನಮ್ಮ ಮಠ ಕೆಳಗೆ ಬಿದ್ದಿದೆ. ಅದನ್ನು ಎತ್ತಿ ಕಟ್ಟುವ ಧರ್ಮಗೋಪುರ ನಿರ್ಮಾಣ ಕಾರ್ಯ ಬಿಟ್ಟು ಮಠಕ್ಕೆ ಗೋಪುರ ಕಟ್ಟಿಸುತ್ತಿರುವಿರೋ? ಮಠವನ್ನು ಯಾರಾದರೂ ಕಟ್ಟಿಸುತ್ತಾರೆ. ನಿಮ್ಮನ್ನು ಪಂಡಿತರನ್ನಾಗಿ ಮಾಡಿದ್ದೇಕೆ?ನೀವು ಮಾಡುವ ಕಾರ್ಯಗಳೇನು? ನಿಮ್ಮನ್ನು ಈ ಸ್ಥಾನಕ್ಕೆ ಕೂಡಿಸಿದ್ದು ಏನು ನನ್ನ ಕರ್ಮವೆನ್ನಲೇ, ಪುಣ್ಯವೆನ್ನಲೇ?' ಸ್ವಲ್ಪ ನಿಷ್ಠುರವಾಗಿ ತೀಳಿಸುತ್ತಾರೆ. ಆ ಪತ್ರವನ್ನು ಓದಿದ ಜಗದ್ಗುರುಗಳು ಕೋಪಿಸಿಕೊಳ್ಳುವುದಿಲ್ಲ. ಬದಲಾಗಿ ಅದನ್ನು ತಮ್ಮ ಲಿಂಗಪೂಜಾ ಪಟ್ಟಿಗೆಯಲ್ಲಿ ಜತನವಾಗಿ ಇಟ್ಟುಕೊಂಡು "ಇದನ್ನು ಓದುವುದೇ ನನ್ನ



ಲಿಂಗಪೂಜೆ! ಇದರಂತೆ ನಡೆವುದೇ ನನ್ನ ಲಿಂಗದಾಚರಣೆ" ಎಂದು ಟಿಪ್ಪಣೆ ಬರೆಯುತ್ತಾರೆ. ಅಂದಿನಿಂದ ಕರ್ನಾಟಕ-ಮಹಾರಾಷ್ಟ್ರಗಳಲ್ಲಿ ಚರಜಂಗಮರಾಗಿ ಸಂಚಾರಗೈಯುತ್ತಾರೆ. ಕೊಲ್ಲಾಪುರದಲ್ಲಿ ಒಂದು ಮಠವನ್ನು ಸ್ಥಾಪಿಸುತ್ತಾರೆ, ಕಾಶಿಯಲ್ಲಿ ಲಿಂಗಾಯತ ಸಾಧಕರ ಅಧ್ಯಯನಕ್ಕೆ ಅನುಕೂಲವಾಗಲು 'ಜಯದೇವವಾಡಿ' ಕಟ್ಟಿಸುತ್ತಾರೆ. ಕರ್ನಾಟಕದ ಅನೇಕ ಕಡೆ ಉಚಿತ ಪ್ರಸಾದ ನಿಲಯಗಳನ್ನು ಪ್ರಾರಂಭಿಸುತ್ತಾರೆ. ಜಾತಿ-ಧರ್ಮಗಳ ಭೇದವಿಲ್ಲದೆ ಮುಸ್ಲಿಂ ಸಮುದಾಯಕ್ಕೂ ಸಹಾಯ-ಸಹಕಾರ ನೀಡುತ್ತಾರೆ.

ಗದಗ ಸಮೀಪದ ಹುಲಕೋಟಿಯ ಕೆ.ಎಚ್.ಪಾಟೀಲ ಅವರು ರಾಜಕಾರಣಿಯಾಗಿ ಪ್ರಸಿದ್ಧರಾಗಿದ್ದರು. ಆದರೆ ಲಿಂಗಾಯತರನ್ನು ಕಂಡರೆ ಅವರಿಗೆ ಅಷ್ಟಕಷ್ಟೇ. ಒಂದು ಸಂದರ್ಭದಲ್ಲಿ 'ಈ ಲಿಂಗಾಯತರ ಕೊರಳೊಳಗಿನ ಲಿಂಗ ಮೊಣಕಾಲಿಗೆ ಕಟ್ಟಿಸುತ್ತೇನೆ' ಎಂದು ಸಾರ್ವಜನಿಕವಾಗಿ ಮಾತನಾಡಿದರು. ಅದೇ ವರ್ಷ ಚುನಾವಣೆಯಲ್ಲಿ ಅವರು ಹೀನಾಯವಾಗಿ ಸೋತರು. ಬೆಳಗಾವಿ ಜಿಲ್ಲೆಯ ಹಿರಿಯ ರಾಜಕಾರಣಿ ಬಿ.ಶಂಕರಾನಂದ ಅವರ ಮಗ ಓಂ ಪ್ರಕಾಶ ಕಣಗಲಿ ಕೂಡ ಚಿಕ್ಕೋಡಿಯಲ್ಲಿ ಒಂದು ಸಾರ್ವಜನಿಕ ಭಾಷಣದಲ್ಲಿ 'ದಲಿತರನ್ನು ಶೋಷಣೆ ಮಾಡುತ್ತ ಬಂದ ಲಿಂಗಾಯತರ ಕೊರಳೊಳಗಿನ ಲಿಂಗ ಗೂಟಕ್ಕೆ ಹಾಕಿಸುವೆ' ಎಂದು ಹೇಳಿ ಚುನಾವಣೆಯಲ್ಲಿ ಹೀನಾಯವಾಗಿ ಸೋತರಷ್ಟೇ ಅಲ್ಲ; ಸಾರ್ವಜನಿಕ ಬದುಕಿನಿಂದಲೇ ದೂರಾಗುವ ಪರಿಸ್ಥಿತಿ ನಿರ್ಮಾಣವಾಯಿತು.

ಇಷ್ಟಲಿಂಗದ ಸಾಮಾಜಿಕ ಆಯಾಮಗಳ ಕುರಿತು ವಿಶ್ವವಿದ್ಯಾಲಯ ಮಟ್ಟದಲ್ಲಿ ಪಿಎಚ್.ಡಿ.ಸಂಶೋಧನೆಯನ್ನೇ ಮಾಡಬಹುದು. ಅಷ್ಟು ವ್ಯಾಪಕವಾದ ಈ ವಿಷಯವನ್ನು ಸಂಕ್ಷಿಪ್ತವಾಗಿ ಇಲ್ಲಿ ಪ್ರಸ್ತಾಪಿಸಿರುವೆ.

●

**ಮಿಾಂಗುಲಿಗನ ಹಕ್ಕಿಯಂತೆ ನೀರ ತಡಿಯಲ್ಲಿದ್ದು**
**ಮೂಗಹಿಡಿದು ಧ್ಯಾನವ ಮಾಡುವರಯ್ಯಾ**
**ಬಿಟ್ಟ ಮಂಡೆವೆರಸಿ ಬಾಯ ಮಿಡುಕಿಸುತೆ**
**ಕಣ್ಣ ಮುಚ್ಚಿ ಬೆರಳನೆಣಿಸುವರಯ್ಯ**
**ನಿಮ್ಮ ಕೈಯಲ್ಲಿ ಕಟ್ಟಿದ ದರ್ಭೆಯ ಹುಲ್ಲು**
**ಕೂಡಲ ಸಂಗನನರಿಯದೆ ಮೊರೆಯಿಡುವಂತೆ.**
**ಕಿಚ್ಚು ದೈವವೆಂದು ಹವಿಯನಿಕ್ಕುವ ಹಾರುವನ ಮನೆಯಲು**
**ಕಿಚ್ಚೆದ್ದು ಸುಡುವಾಗ ಬಚ್ಚಲ ನೀರ, ಬೀದಿಯ ದೂಳವ ಹೊಯ್ದು**
**ಬೊಬ್ಬಿಟ್ಟೆಲ್ಲ ಕರೆವರಯ್ಯಾ**
**ಕೂಡಲ ಸಂಗಮದೇವನ ವಂದನೆಯ ಮರೆದು ನಿಂದಿಸುತ್ತಿದ್ದರು.**

# ಶರಣ ಕ್ರಾಂತಿ – ನನ್ನ ಪ್ರತಿಕ್ರಿಯೆ

**ಡಾ. ಲೋಕೇಶ ಅಗಸನಕಟ್ಟೆ**

*ದಶಮಿ, ತರಳಬಾಳು ಬಡಾವಣೆ*
*ಚಿತ್ರದುರ್ಗ - ೫೭೭ ೫೦೨*
*೯೪೪೮೦ ೧೩೩೩೩*

ಡಾ. ಲೋಕೇಶ ಅಗಸನಕಟ್ಟೆ ಅವರು ಕಾದಂಬರಿಕಾರರು, ಕಥೆಗಾರರು ಹಾಗೂ ವಿಮರ್ಶಕರು. ನಿವೃತ್ತ ಕನ್ನಡ ಪ್ರಾಧ್ಯಾಪಕರಾಗಿರುವ ಇವರು ಅನೇಕ ಮಹತ್ವದ ಕೃತಿಗಳನ್ನು ರಚಿಸಿದ್ದಾರೆ. ದಾರ್ಶನಿಕ ವ್ಯಕ್ತಿಯೊಬ್ಬನನ್ನು ಕುರಿತ ಕಾದಂಬರಿ 'ಅತೀತ ಲೋಕದ ಯಾತ್ರಿಕ' ಪ್ರಕಟವಾದ ತಿಂಗಳಲ್ಲಿಯೇ ಮರು ಮುದ್ರಣವನ್ನು ಕಂಡಿತು. ಇತ್ತೀಚಿಗೆ ಪ್ರಕಟವಾದ ಇವರ ಕೃತಿ 'ವೈಷ್ಣವ ಜನತೋ' ಗಾಂಧಿ ಮತ್ತು ಅಂಬೇಡ್ಕರ್ ಅವರ ಸಹಯಾನವನ್ನು ಕಂಡರಿಸುವ ಭಾಷೆಯದ್ದಾಗಿದೆ.

**೧) ಶರಣ ಚಳುವಳಿಯನ್ನು ಮತ್ತೆ ನಿರೀಕ್ಷಿಸಬಹುದೆ?**

**ಉತ್ತರ:** ಅನ್ಯಾಯ, ಅಸಮಾನತೆ ಎಲ್ಲಿಯವರೆಗೂ ಜೀವಂತವಾಗಿರುವವೋ ಅಲ್ಲಿಯವರೆಗೂ ಅವುಗಳ ವಿರುದ್ಧದ ಹೋರಾಟವು ನಿರಂತರವಾಗಿ ಇರುವಂತದೆ. ಶರಣ ಚಳವಳಿ ನಡೆದ ಮೇಲೆ ಇಂಥಾ ಅನೇಕ ಚಳವಳಿಗಳು ನಿರಂತರವಾಗಿ ನಡೆಯುತ್ತಲೇ ಬಂದಿವೆ: ಸ್ವರೂಪ ಬೇರೆಯಾದರೂ ತಾತ್ವಿಕತೆಯಲ್ಲಿ ಅವು ಒಂದೆ. ಅಹಿಂಸಾರೂಪದ ಶರಣಚಳವಳಿ, ಗಾಂಧಿಯ ಆಶಯದ ಚಳವಳಿಗಳು ಮುಂದೆ ಬರುವುದು ಕಷ್ಟವೆ. ಈಚೆಗೆ ಪ್ರಾಯೋಗಿಕವಾಗಿ ನಡೆಸಿದ 'ಮತ್ತೆ ಕಲ್ಯಾಣ'ದಂತ ಕಾರ್ಯಕ್ರಮಗಳು ಕೇವಲ ಆಶಯರೂಪದ ಪ್ರತಿಫಲವೇ ಹೊರತು ಅನುಷ್ಠಾನದಿಂದ ಹಿಂದೆ ಬೀಳುತ್ತವೆ. ಅದರ ಸಂಯೋಜಕರಿಗೂ ತಾತ್ವಿಕವಾಗಿ ಆ ಬಗ್ಗೆ ಸ್ಪಷ್ಟತೆ ಇದ್ದಂತೆ ತೋರುವುದಿಲ್ಲ. ಆದುದರಿಂದ ಶರಣ ಚಳವಳಿಯ 'ಅಖಂಡತ್ವವನ್ನು' ಒಳಗೊಂಡ ಚಳವಳಿಗಳು ಮುಂದೆ ಬರುವುದು ಅಸಂಭವವೆ.

**೨) ಶರಣ ಚಳುವಳಿಯನ್ನು ಆರಾಧನಾ ನೆಲೆಯಿಂದ ನೋಡುತ್ತಿರುವುದೇ ಅದರ ಪ್ರಾಯೋಗಿಕ ನೆಲೆಗಳ ಅಳವಡಿಕೆಗಿರುವ ತೊಡಕು ಎನ್ನಬಹುದೆ?**

**ಉತ್ತರ:** ಪ್ರಶ್ನೆ ಎರಡು ಮತ್ತು ಮೂರರಲ್ಲಿಯೇ ಅದಕ್ಕೆ ಸಂಬಂಧಿಸಿದ ಉತ್ತರಗಳಿವೆ. ಹಾಗೆ ಮೊದಲ ಪ್ರಶ್ನೆಗೂ ಕೂಡ. ಜಂಗಮರೂಪಿಯಾಗಿದ್ದ, ಎಲ್ಲರನ್ನೂ ಒಳಗೊಳ್ಳುವ ಆಶಯವನ್ನು ಮತ್ತು ಪ್ರಯೋಗಗಳನ್ನು ಮಾಡುತ್ತಾ, ಆತ್ಮವಿಮರ್ಶೆಗೆ ಒಳಪಡಿಸುತ್ತಾ,



ಆರೋಗ್ಯಪೂರ್ಣ ಸಂವಾದವನ್ನು ಸೇರ್ಪಡಿಸಿಕೊಳ್ಳುತ್ತಿದ್ದ ಆ ಚಳುವಳಿ ಕೆಲವೇ ವರ್ಷಗಳಲ್ಲಿ ಸಾಂಸ್ಥಿಕರೂಪವನ್ನು ಪಡೆಯತೊಡಗಿದ್ದು ಅದೀಗ ಪೂರ್ಣಫಲನೀಡುತ್ತಿದೆ. ಜಂಗಮ ಸ್ಥಿತಿ ಮರೆಯಾಗಿ ಸ್ಥಾವರ ಸ್ಥಿತಿಗೆ ಬಂದು ನಿಂತಿದೆ. ಎಲ್ಲವನ್ನೂ ಪೂಜ್ಯಭಾವನೆಯಿಂದಲೇ ನೋಡಬೇಕೆಂದು ಒತ್ತಾಯಿಸುವ ಫ್ಯೂಡಲ್ ಮನಸ್ಥಿತಿಯ ಕಾಲದಲ್ಲಿ ನಾವು ಇದಕ್ಕಿಂತ ಭಿನ್ನಸ್ಥಿತಿಯನ್ನು ನಿರೀಕ್ಷಿಸಲು ಕಷ್ಟ. ಜಾತಿ ಮತ್ತು ಧರ್ಮಗಳನ್ನು ಕುರಿತು ಭಾವನೆಗಳು ಸಾಂದ್ರಗೊಳ್ಳುತ್ತಿರುವ ಈ ದಿನಮಾನಗಳಲ್ಲಿ ಮುಕ್ತತೆಯನ್ನು ಎಲ್ಲೂ ನಿರೀಕ್ಷಿಸಲು ಸಾಧ್ಯವಾಗುತ್ತಿಲ್ಲ. ಮುಚ್ಚಿಕೊಂಡು ಹೋಗಿರುವ, ರೂಕ್ಷ ಕಬಂಧಬಾಹುಗಳಲ್ಲಿ ಬಂಧಿಯಾಗಿರುವ ಮನಸ್ಸುಗಳಿಂದ ಮುಕ್ತತೆಯನ್ನು ಬಯಸಲು ಸಾಧ್ಯವೇ ಇಲ್ಲ.

**೩) ಶರಣ ಚಳುವಳಿಯ ಮುಕ್ತತೆಯೇ ಕಳೆದುಹೋಗಿ, ಅದನ್ನು ಸಂಸ್ಥೀಕರಿಸುವ ಪ್ರಯತ್ನಗಳೇ ಮುಂಚೂಣಿಗೆ ಬಂದಿವೆ ಎನ್ನುವ ಅಭಿಪ್ರಾಯವನ್ನು ನೀವು ಒಪ್ಪುತ್ತೀರಾ?**

**೪) ದಲಿತ ಸಂಕಥನಕ್ಕೆ ಶರಣ ಚಳುವಳಿಯ ಕೊಡುಗೆಗಳು:**

**ಉತ್ತರ:** ಶೋಷಣೆಯ ವಿರುದ್ಧದ ಹೋರಾಟವೇ ಶರಣ ಚಳವಳಿಯ ಮುಖ್ಯ ಧ್ಯೇಯವಾಗಿದ್ದುದರಿಂದ ಎಲ್ಲ ದಮನಿತರ ಪರವಾದ ಚರ್ಚೆ, ಚಿಂತನೆ ಹಾಗೂ ನಿರಚನಗಳಿಂದ ವಚನ ಚಳವಳಿ ತುಂಬಿಹೋಗಿದೆ. ಸ್ತ್ರೀ ಸಂಕಥನವೂ ಸೇರಿದಂತೆ ಹಲವು ಸಂಕಥನಗಳು ವಚನಗಳಲ್ಲಿ ಕಾಣುವಂತೆ ದಲಿತ ಸಂಕಥನದ ಆಲೋಚನೆಗಳೂ ಅಲ್ಲಿ ಕಾಣಬರುತ್ತವೆ.

ಅ) ಮೇಲು-ಕೀಳಿಗೆ ಸಂಬಂಧಿಸಿದ ವ್ಯಾಖ್ಯಾನಗಳು. ಅದರಲ್ಲಿ ಕೀಳಿಗೆ ಶ್ರೇಷ್ಠತೆಯನ್ನು ಕಲ್ಪಿಸಿ 'ಮೇಲೆಂಬ' ಅಹಂಕಾರವನ್ನು ಒಡೆದು ಹಾಕುವುದು.

ಆ) ಹುಟ್ಟಿನಿಂದ ಬರುವ ಜಾತಿ ಶ್ರೇಷ್ಠತೆಯನ್ನು ಅಲ್ಲಗಳೆದು ವ್ಯಕ್ತಿ ಪ್ರತಿಭೆ, ಶೀಲಗಳು ಸಾಧನೆಗಳಿಂದ ಅವು ಸಾಬೀತಾಗುವುದನ್ನು ವಿವರಿಸಿರುವುದು.

ಇ) ವೇದಾಗಮಗಳಿಂದ ಹಿಡಿದು ಪರಂಪರೆ ಆರಾಧಿಸುವ ಮುನಿ ಸಂತ ಪರಂಪರೆಯ ಜಾತಿಯನ್ನು ನೆನಪಿಸುವ, ವೈದಿಕೀಕರಣಗೊಂಡಿರುವ ಹುನ್ನಾರವನ್ನು ಬಯಲು ಮಾಡುವ ಪ್ರಯತ್ನಗಳು.

ಈ) ಅಂತರ್‌ಜಾತಿ ವಿವಾಹ, ಸಹಭೋಜನ, ಸಹಚಿಂತನೆ ಮತ್ತು ದಲಿತರ ಅಭಿವ್ಯಕ್ತಿಗಳಿಗೆ ವೇದಿಕೆಯಾಗುವ ಸಂಗತಿಗಳು.

ಉ) ಹೊಲೆತನದ ಹೊಸ ವ್ಯಾಖ್ಯಾನ.

**೫) ಶರಣರ ಸಮುದಾಯದ ಪರಿಕಲ್ಪನೆ ಯಾವುದು? ಅದಕ್ಕೊಂದು ಸಮಗ್ರತೆ ಇದೆಯೇ?**

**ಉತ್ತರ:** ಸರ್ವವನ್ನು ಒಳಗೊಳ್ಳುವ, ಸರ್ವರ ಏಳ್ಗೆಯನ್ನು ಅಧ್ಯಾತ್ಮಿಕ ನೆಲೆಯಲ್ಲಿ ಸಾಧ್ಯವಾಗಿಸುವ ಲೋಕಾಂತದ ಪರಿಭಾಷೆಯಲ್ಲಿ ರೂಪಿಸಿದ ಸಮುದಾಯ ಪರಿಕಲ್ಪನೆ ಶರಣರದ್ದು. ಅದು ಸಾಮಾಜಿಕ, ಆರ್ಥಿಕ, ಲಿಂಗಸಮಾನತೆಯ ಆಶಯದಲ್ಲಿ ಆದರ್ಶೀಕರಿಸಿದ ಪರಿಕಲ್ಪನೆ. ಆದರೆ, ಇದು ಯುಟೋಪಿಯವಲ್ಲ; ಸಂಭವನೀಯ ಎಂಬುದನ್ನು ಸಾಧ್ಯವಾಗಿಸುವ ಪ್ರಯತ್ನದ ಮಾದರಿಯನ್ನು ಮಂಡಿಸಿದ ಪರಿಕಲ್ಪನೆ ಇದು. ಕಲ್ಪನೆ ಮತ್ತು ವಾಸ್ತವ ಎರಡೂ ಬೇರಿಲ್ಲದಂತೆ ಬೆಸೆದ ಪರಿಕಲ್ಪನೆ. ಆದರೆ, ಭಕ್ತನಾಗದೆ ಭವ ತಪ್ಪದೆಂದು ಪರಿಭಾವಿಸಿದ

ರೀತಿಯು ಸಮಗ್ರತ್ವ ತತ್ವಕ್ಕೆ ಕೊಂಚ ಹಿನ್ನಡೆಯನ್ನು ತಂದಂತೆ ಭಾಸವಾಗುತ್ತದೆ. ಭೇದವಿಲ್ಲವೆನ್ನುವೆಡೆ ಭೇದದ ಮಾತು ಅವರ ಕಾಲದ್ದಲ್ಲದೆ ಪ್ರಕ್ಷಿಪ್ತವೇನಲ್ಲ.

**೬) ಲಿಂಗನ್ಯಾಯದ ಪರಿಕಲ್ಪನೆ ಶರಣರಲ್ಲಿ ಸ್ಪಷ್ಟವಾಗಿ ಬೇರೂರಿತ್ತು ಎಂದು ನಿಮಗನಿಸುತ್ತದೆಯೇ?**

**ಉತ್ತರ:** ಈಗಿನ ಸಾಮಾಜಿಕ ಚಳವಳಿಗಳು ಎತ್ತಿಹಿಡಿಯುವಷ್ಟು ಢಾಳಾಗಿ ವಚನಕಾರರಲ್ಲಿ ಲಿಂಗತಾರತಮ್ಯದ ಧ್ವನಿ ಎದ್ದಂತೆ ಕಾಣುವುದಿಲ್ಲ. ಆದರೆ, ಈ ಬಗೆಯ ಪುರುಷ ಯಜಮಾನಿಕೆಯ ಧೋರಣೆಯ ವಿರುದ್ಧ ಅವರಿಗೆ ಕಲ್ಪನೆ ಇತ್ತು ಮತ್ತು ಆ ಬಗ್ಗೆ ಅವರು ದನಿ ಎತ್ತಿರುವುದು ಸ್ಪಷ್ಟವಾಗೇ ಗೋಚರವಾಗುತ್ತದೆ. ಅಲ್ಲಮನು ಆತ್ಮದ ಕುರಿತು ಮಾತನಾಡುವಾಗ, ಅಕ್ಕನ, ಬಸವಣ್ಣನ ಅನೇಕ ವಚನಗಳಲ್ಲಿ ಇದು ಸ್ಪಷ್ಟವಾಗಿ ಗೋಚರವಾಗುತ್ತದೆ. ಆ ಬಗ್ಗೆ ಅವರಿಗೆ ಸ್ಪಷ್ಟತೆ ಇತ್ತು ಎಂಬುದರಲ್ಲಿ ಎರಡು ಮಾತಿಲ್ಲ.

**೭) ವಚನಕಾರ್ತಿಯರ ಹೋರಾಟಕ್ಕೆ ಪ್ರತ್ಯೇಕ ಅಸ್ತಿತ್ವ ಇದೆಯೇ?**

**ಉತ್ತರ:** ಭಾಷೆ, ಪರಿಭಾಷೆಯ ವಿಚಾರದಲ್ಲಿ ವಚನಕಾರ್ತಿಯರು ಪುರುಷ ಹಾಗೂ ಮುಖ್ಯ ವಚನಕಾರರ ಹಾದಿಯನ್ನೇ ಅನುಸರಿಸಿದ್ದಾರೆಂದು ಮೇಲ್ನೋಟಕ್ಕೆ ತೋರಬಹುದು. ಆದರೆ, ಅದು ಹಾಗಿಲ್ಲ. ಲಿಂಗಮ್ಮ, ಅಕ್ಕಮಹಾದೇವಿ, ಸೂಳೆಸಂಕವ್ವೆ, ನೀಲಾಂಬಿಕೆ, ಆಯ್ದಕ್ಕಿ ಲಕ್ಕಮ್ಮ – ಈ ಮೊದಲಾದವರ ವಚನಗಳಲ್ಲಿ ಬೇರೆಯದೇ ಆದ ಲೋಕ ಗ್ರಹಿಕೆ ಇದೆ. ಅದು ಕೇವಲ ಸ್ತ್ರೀಮಾತ್ರ ಕಾಣಬಲ್ಲ ಲೋಕವೆ. ಈ ಅಧ್ಯಯನ ಈಚೀಚೆಗೆ ನಡೆಯುತ್ತಿದೆ. ಅದು ಭಿನ್ನಧ್ವನಿ– ಎಂಬುದು ಸ್ಪಷ್ಟವೆ.

**೮) ನಿಮಗೆ ಪ್ರಿಯರಾದ ವಚನಕಾರರು ಹಾಗೂ ವಚನಕಾರ್ತಿಯರನ್ನು ಕುರಿತು ವಿವರವಾಗಿ ಹೇಳಿ.**

**ಉತ್ತರ:** ಶೂನ್ಯತ್ವದ ನೆಲೆಯಲ್ಲಿ ಇಡೀ ಬದುಕಿನ ಅರ್ಥಶೋಧಿಸುವ ಅಲ್ಲಮ ಪ್ರಾಯಶಃ ಎಲ್ಲರಿಗೂ ಮೆಚ್ಚುಗೆಯಾಗುವ ವಚನಕಾರನೆಂಬುದು ನಿಸ್ಸಂದೇಹ. ಮೇಲಾಗಿ ಅಂತಹ ದೊಡ್ಡ ನಿರಚನವಾದಿಯನ್ನು ಶರಣರ ಚಳವಳಿಯಲ್ಲಿ ಮತ್ತೊಬ್ಬರನ್ನು ಕಾಣಲು ಸಾಧ್ಯವಿಲ್ಲ. ಭೌತಿಕ ಜಗತ್ತಿನ ವ್ಯವಹಾರಗಳ ಬಗೆಗೆ ಅವನದು ಹೇಗೆ ದಿವ್ಯ ನಿರ್ಲಕ್ಷ್ಯವೋ ಹಾಗೆ ಅಂತರಂಗದ ಆತ್ಮಜಗತ್ತಿನ ಬಗ್ಗೆ ಅವನದು ಚಿಕಿತ್ಸಕ ನೋಟ. ಎಲ್ಲವನ್ನೂ ಒಳಗೊಳ್ಳಬಲ್ಲ, ಎಲ್ಲದರಿಂದ ಕ್ಷಣಕಾಲ ಜಾರಿ ಹೋಗಬಲ್ಲ, ಅವನಿಗೆ ಗುಹೇಶ್ವರನೂ ಶಾಶ್ವತನಲ್ಲ. ಅವನ ಸಾವನ್ನೂ ಪರಿಭಾವಿಸಬಲ್ಲ. ಅನಾತ್ಮವಾದಿಯಾಗಿ ಅವನು ಸಾಗಿ ಬಂದ ದಾರಿಗೆ ಒಂದು ಪರಂಪರೆಯೇ ಇದೆ. ಬುದ್ಧನ ಬಳಿವಿಡಿದು ಹೊರಟ ಈ ದಾರಿ ನಾಗಾರ್ಜುನ, ಸರಹಪಾದರನ್ನೂ ದಾಟಿ ಅಲ್ಲಮನಲ್ಲಿ ಮತ್ತೆ ಕಾಣಿಸುತ್ತದೆ. ಹೀಗಾಗಿ ಲೋಕಾದ ದುಃಖದ ಬಿಡುಗಡೆಯ ಮಾರ್ಗದ ಪಯಣಿಗ ಅಲ್ಲಮ. ಅವನ ನಡೆ ಶರಣ ಚಳವಳಿಗೂ ವಿಸ್ಮಯವೇ. ಅವನೊಡನಿದ್ದೂ ಅವನಂತಾಗಲೊಲ್ಲದೆ ದೂರ ಉಳಿದ ಶರಣರ ನಿಲುವು ವಿಸ್ಮಯಕ್ಕೆ ಕಾರಣವೆ. ಪ್ರಾಯಶಃ ಹಾಗೆ ನಡೆವ ದಾರಿ ದುರ್ಗಮವೆಂದು ಅವರಿಗೂ ತೋರಿತೆ?

ಈ ದಾರಿಯ ದುರ್ಗಮವಾದರೂ ಸರಿ ಇಲ್ಲೇ ನಡೆಯುವೆನೆಂದು ಹಠತೊಟ್ಟ ಅಕ್ಕಮಹಾದೇವಿ ಒಂದು ದೊಡ್ಡ ಮಾದರಿ. ಅಲ್ಲಮನ, ವಚನಚಳವಳಿಯ ಪರಿಚಯ



ವಾಗದೆಯೂ, ಸ್ವಯಂಗುರುವಾಗಿ, ಸ್ವಯಂಭೂವಾಗಲು ಯತ್ನಿಸಿ ತಳಮಳದ ಹಾದಿಗೆ ಬಿದ್ದವಳಿಗೆ ದಾರಿ ಕಾಣಿಸಿದ್ದೂ ಅಲ್ಲಮನೆ. ಲೋಕದ ಎಲ್ಲ ದಂದುಗದಲ್ಲಿ ಕಾದು ತನ್ನನು ತಾನು ಬಾಗಿಸಿಕೊಡು ಬೆಳೆದವಳು ಅಕ್ಕಮಹಾದೇವಿ. ಅವಳಿಗೆ ಸಾಮಾಜಿಕ ಕಳಕಳಿ ಹೆಚ್ಚು ಇರಲಿಲ್ಲವೆಂಬ ಮಾತು ನಿಷ್ಪ್ರಯೋಜಕ. ಅವಳ ಗಮ್ಯವೇ ಬೇರೆ. ಆ ಗಮ್ಯದ ಕಡೆ ಮುಖ ಮಾಡಿದ ಅವಳಿಗೆ ಅವಳ ಆದ್ಯತೆಗಳೇ ಬೇರೆ. ಬಸವಣ್ಣನೋ, ಚನ್ನಬಸವಣ್ಣನೋ ನಡೆದ ಹಾದಿಯಂತೆ ಅವಳ ಹಾದಿ ಇರಲು ಹೇಗೆ ಸಾಧ್ಯವಿಲ್ಲವೋ ಹಾಗೆ ಅಕ್ಕನದು. ಸ್ತ್ರೀ ಅಸ್ಮಿತೆಯ ದ್ಯೋತಕವಾದ ಆಕೆಯ ನಡೆ–ನುಡಿ ಎರಡು ಒಂದಾದ ಪರಿ ಬೇರಾವ ವಚನಕಾರ, ಕಾರ್ತಿಯರಲ್ಲೂ ಕಾಣದು. ಆಕೆಯೂ ಒಬ್ಬ ಸಾಧಕಿ ಹೇಗೋ ಹಾಗೆ ನಿರಚನವಾದಿಯೂ ಹೌದು. ಪ್ರಕೃತಿಯಲ್ಲೇ ಪರಮನನ್ನು ಅರಸಿ ಹೊರಟ ಆಕೆಯ ವಚನಗಳು ಎಲ್ಲ ಕಾಲಕ್ಕೂ ಆಧ್ಯಯನಕ್ಕೆ ತೆರೆದುಕೊಂಡೇ ಇರುತ್ತವೆ. ಈಕೆಯ ಹಾಗೆ ಅಂಚಿನ ಸಮಾಜದ ಅನೇಕ ವಚನಕಾರರೂ ಅಭ್ಯಾಸ ಯೋಗ್ಯರೇ ಆಗಿದ್ದಾರೆ.

**೯) ಹೆಣ್ಣು ಮತ್ತು ಆರ್ಥಿಕ ಸ್ವಾವಲಂಬನೆಯ ಹೊಳಹುಗಳನ್ನು ವಚನಕಾರ್ತಿಯರಲ್ಲಿ ಗುರುತಿಸಲು ಸಾಧ್ಯವಿದೆಯೇ?**

**ಉತ್ತರ:** ವಚನಕಾರರ ಕಾಯಕ ಪ್ರಜ್ಞೆಗೂ ಆರ್ಥಿಕ ಸ್ವಾವಲಂಬನೆಗೂ ನೇರ ಸಂಬಂಧವಿರುವುದು; ಈ ತಾತ್ವಿಕತೆಯನ್ನು ಒಪ್ಪಿನಡೆದ ಎಲ್ಲ ವಚನಕಾರರಲ್ಲೂ ಈ ಪ್ರಜ್ಞೆ ನಿರಂತರವಾಗಿದ್ದರಿಂದಲೇ ದಾಸೋಹದ ಪರಿಕಲ್ಪನೆ ಪಾಲನೆಗೆ ಬಂದದ್ದು. ದಾಸೋಹಕ್ಕೆ ನೀಡುವ ಒಂದು ಬೊಗಸೆ ಅಕ್ಕಿಯೂ ಸ್ವಂತ ಪರಿಶ್ರಮದಿಂದ ಗಳಿಸಿದ್ದೇ ಆಗಿರಬೇಕೆಂಬ ನೈತಿಕತೆಯ ಮಾತು ಗುರುವಾದೊಡು ಕಾಯಕದಿಂದಲೇ ಮುಕ್ತಿ ಎಂಬ ಮಾತು ಎಲ್ಲ ವಚನಕಾರರಲ್ಲೂ ಕಾಣಬರುತ್ತದೆ. ಹೆಣ್ಣು ಗಂಡಿನ ಅಡಿಯಾಳೆಂಬ ಭಾವ ಮುಖ್ಯವಾಗಿ ಅಲ್ಲಿ ಎದ್ದು ಕಂಡುಬರುವುದರ ಬದಲು 'ಸತಿ ಪತಿಯೊಂದಾದ ಭಕ್ತಿಯ ಹಿತ'ದ ಮಾತು ಆಡುತ್ತಾರೆ. ಭಕ್ತಿಗಾಗಿ, ಆತ್ಮೋದ್ಧಾರಕ್ಕಾಗಿ ಸ್ವಾವಲಂಬನೆಯನ್ನು ಪಡೆದಿರಬೇಕೆಂಭುದರ ಕಡೆ ಮತ್ತು ಆ ತುಡಿತದ ಕಡೆ ಅವರು ಶ್ರಮಿಸಿದ್ದೆ ಹೆಚ್ಚು. ನೀಲಾಂಬಿಕೆಯ, ಅಕ್ಕನಾಗಮ್ಮನ ಕೊನೆಯ ದಿನಗಳ ವಚನಗಳಲ್ಲಿ ಹಾಗೂ ಲಿಂಗಮ್ಮ, ಸಂಕವ್ವೆಯ ವಚನಗಳಲ್ಲಿ ಇದನ್ನು ಕಾಣಬಹುದು. ಆರ್ಥಿಕ ಸ್ವಾವಲಂಬನೆಯ ಪ್ರಶ್ನೆ ಲೌಕಿಕದಲ್ಲಿದ್ದವರಿಗೆ ಕಾಡುವ ಪ್ರಶ್ನೆ. ಅದರಾಚೆ ಹೊರಟವರ ಚಿಂತನೆಯ ಪರಿಯೇ ಬೇರೆ.

**೧೦) ಸಹಿಷ್ಣುತೆಯನ್ನು ಶರಣ ಚಳುವಳಿಯ ಆಶಯ ಎಂದು ಹೇಳಲು ಸಾಧ್ಯವಿದೆಯೇ?**

**ಉತ್ತರ:** ಎಲ್ಲವನ್ನೂ ಮೌನವಾಗಿ ಸಹಿಸುವುದು ಒಂದು ಬಗೆಯ ಸಹಿಷ್ಣುತೆಯಾದರೆ, ತಮ್ಮ ತಾತ್ವಿಕತೆಯ ವಿರೋಧವಾದ ಎಲ್ಲ ಅಮಾನವೀಯ ನಡೆಗಳೂ ದೂಷಣೆಗೆ ಯೋಗ್ಯವೆಂದು ಅವುಗಳನ್ನು ಸಹಿಸದಿರುವುದು ಇನ್ನೊಂದು ಬಗೆಯ ಸಹಿಷ್ಣುತೆ, ಇದನ್ನು ಅಸಹಿಷ್ಣತೆ ಎಂದು ಕರೆಯಬೇಕಿಲ್ಲ. ಮೌನವಾಗಿರುವ ಕಡೆ ಅಸಹಾಯಕತೆ ಇದ್ದರೆ ಇಲ್ಲಿ ಸಂಭವನೀಯ ಸಮಾಜದ ರೂಪಣದ ಸಾಧ್ಯತೆ ಇರುತ್ತದೆ. ಯಾರು ಯಾವ ಬಿಂದುವಿನಲ್ಲಿ ನಿಂತು 'ಸಹಿಷ್ಣುತೆ'ಯನ್ನು ನೋಡುತ್ತಾರೆ ಅವರವರಿಗೆ ಭಿನ್ನರೂಪಗಳೇ ಕಾಣುತ್ತವೆ. ಜೈನರು,

ಶೈವರು ಕೊನೆಗೆ ವೈಷ್ಣವರಿಗೆ ಇದು ಕಾಣುವ ರೀತಿಯೇ ಬೇರೆ. ಹಾಗಾಗಿ ವಚನಕಾರರು ಸಹಿಷ್ಣುಗಳಾಗಿದ್ದರು – ಎಂಬುದು ಸಾಪೇಕ್ಷವಾದುದು.

**೧೧) ವಚನಗಳ ಕಾವ್ಯ ಸೌಂದರ್ಯವನ್ನು ಕುರಿತು ಹೇಳಿ.**

**ಉತ್ತರ:** ಯಾವುದನ್ನು ಕಾವ್ಯವೆಂದು ಕರೆಯಬಹುದೆಂದು ಮಿಮಾಂಸೆ ಹೇಳಿದೆಯೋ ಆ ಎಲ್ಲ ತತ್ವಗಳನ್ನೂ, ಪರಿಕರಗಳನ್ನೂ ಒಳಗೊಂಡು ಅದನ್ನು ಮೀರಿದ ರಚನೆಗಳೇ ವಚನಗಳಾಗಿರುವುದೇ ಅವು ಸುಂದರವಾಗಿರಲು ಮತ್ತು ಎಲ್ಲ ಕಾಲಕ್ಕೂ ಸಲ್ಲುವಂತೆ ಆಗಿರುವುದು. ಪ್ರತಿಮೆ, ರೂಪಕ, ಬೆಡಗು, ಆಡುನುಡಿಯ ಪಲುಕು, ಲಯಾನ್ವಿತವಾಗಿರುವ ಬಗೆ– ಈ ಎಲ್ಲವೂ ವಚನಗಳ ಸೌಂದರ್ಯವನ್ನು ಇಮ್ಮಡಿಗೊಳಿಸಿವೆ. ಗದ್ಯವೆಂದು ಮೇಲುನೋಟಕ್ಕೆ ಕಂಡರೂ ಅವು ಗದ್ಯವೇ? ಪದ್ಯಗಂಧಿ– ಎಂದು ಕರೆದದ್ದು ಅದರ ಅಪೂರ್ವತೆಯನ್ನು ವಿವರಿಸಲೆಂದೆ. ಮಹಾಕವಿಗಳ ಸೋದ್ದೇಶ್ಯ ರಚನೆಯ ಹಿಂದಿರುವ ಪಾಂಡಿತ್ಯಕ್ಕೂ, ಅವಾವೂ ಇಲ್ಲದೆ ಸರಾಗವಾಗಿ ಹೊಮ್ಮಿದ ಭಾವದ ಪಲುಕುಗಳು 'ನೀನು ಒಲಿಸಿದಂತೆ ಹಾಡುವೆ' ಎನ್ನುವ ಧೋರಣೆಯು ಸಹಜ ಕಾವ್ಯಾತ್ಮಕ ಭೂಷಣಗಳನ್ನು ತೊಡಿಸಿ ನಿರಾಭರಣ ಭಾವಗೀತೆಗಳಾಗಿ ಅವು ಹೊರ ಹೊಮ್ಮಿವೆ. ಅದೇ ವಚನಗಳ ಸೌಂದರ್ಯಕ್ಕೆ ಕಾರಣ. ವಸ್ತು–ಭಾಷೆ ಮತ್ತೆ ಶೈಲಿಯು ವಚನಗಳನ್ನು ಅನನ್ಯಗೊಳಿಸಿವೆ.

**೧೨) ಶರಣ ಚಳುವಳಿಯಲ್ಲಿ ನಿಮಗೆ ಅತ್ಯಂತ ಪ್ರಿಯವಾದ ಅಂಶಗಳು ಯಾವುವು?**

**ಉತ್ತರ:** ಸಮಸಮಾಜದ ಹಂಬಲ. ಲಿಂಗ ಸಮಾನತೆ, ಜಾತಿವಿನಾಶ ಸಂಕಲ್ಪ, ಪುರೋಹಿತ ಶಾಹಿಯ ದಬ್ಬಾಳಿಕೆಯ ವಿರುದ್ಧದ ಧ್ವನಿ, ಸರ್ವೋದಯ ಪರಿಕಲ್ಪನೆ, ಗೃಹೀತಗಳ ಮರು ವ್ಯಾಖ್ಯಾನ. ನಿರಚನದ ಜೊತೆ ಪರ್ಯಾಯಗಳನ್ನು ಕಟ್ಟುವರೀತಿ. ಅಚ್ಚಗನ್ನಡ ನುಡಿಯನ್ನು ಕಾವ್ಯಾತ್ಮ ಭಾಷೆಯನ್ನಾಗಿ ರೂಪಿಸಿದ್ದು. ಎಲ್ಲರನ್ನೂ ಒಳಗೊಳ್ಳುವ ಪರಿ.

**೧೩) ವಚನಕಾರರನ್ನು ಮಾದರಿಯಾಗಿ ನೋಡುವುದರ ಬಗ್ಗೆ ನಿಮ್ಮ ಆಲೋಚನೆಗಳು:**

**ಉತ್ತರ:** ಒಂದು ಹಂತದವರೆಗೆ ಎಲ್ಲರೂ ಮಾದರಿಗಳೆ: ಎಲ್ಲವೂ ಮಾದರಿಗಳು ಆ ಮಾದರಿತನವನ್ನು ಮೀರಿ ಇನ್ನೊಂದು ಮಾದರಿಯಾಗುವವರೆಗೆ ಮಾದರಿ. ಮಾದರಿ ಗಮ್ಯವಲ್ಲ. ಆ ದಾರಿ ಹಿಡಿದು ಸ್ವಯಂಹಾದಿ ಹಿಡಿದು ಮತ್ತೊಂದು ಮಾದರಿಯಾಗುವುದೇ ಮುಂದೆ ಇರುವ ಆಯ್ಕೆ. ವಚನಕಾರರಾಗಲಿ ಇನ್ನಾರೇ ಆಗಲಿ ಆಲಂಬನೆಯಾಗಬಾರದು. ಅದು ಪ್ರೇರಕ ಶಕ್ತಿಯಾಗಿ ಸ್ವೀಕರಿಸಿದರೆ ಜಂಗಮತ್ವ ಇಲ್ಲವೆಂದರೆ ಸ್ಥಾವರ. 'ಪಿತೃಹತ್ಯೆಯಾಗದೆ' ಪರವನ್ನು ಕಾಣಲಾಗದು. ●

ಬೆಟ್ಟಕ್ಕೆ ಸಾರವಿಲ್ಲೆಂಬರು
ತರುಗಳ ಹುಟ್ಟುವ ಪರಿ ಇನ್ನೆಂತಯ್ಯಾ
ಇದ್ದಿಲಿಗೆ ರಸವಿಲ್ಲೆಂಬರು
ಕಬ್ಬುನ ಕರಗುವ ಪರಿ ಇನ್ನೆಂತಯ್ಯಾ
ಎನಗೆ ಕಾಯವಿಲ್ಲೆಂಬರು
ಚೆನ್ನಮಲ್ಲಿಕಾರ್ಜುನನೊಲಿವ ಪರಿ ಇನ್ನೆಂತಯ್ಯಾ



# ವಚನ–ವೈಚಾರಿಕತೆ–ವೈಜ್ಞಾನಿಕ ಮನೋಭಾವ

**ಸುಮಂಗಲಾ ಎಸ್. ಮುಮ್ಮಿಗಟ್ಟಿ**

*ನಂ. 302/25, ಜೇನುಕಲ್ ಪ್ಯಾರಡೈಸ್,*
*ಪೈಪ್‌ಲೈನ್ ರಸ್ತೆ, ಕರ್ನಾಟಕ ಲೇಔಟ್*
*1ನೇ ಹಂತ, ಬೆಂಗಳೂರು – 560 086*

*94810 35983*

ಜಗತ್ತು ಇಂದು ಜಾಗತಿಕ ತಾಪಮಾನದ ಏರಿಕೆ ಮತ್ತು ಹವಾಮಾನ ಬದಲಾವಣೆಯ ಪರಿಣಾಮಗಳಿಂದ ತತ್ತರಿಸಿ ಹೋಗುತ್ತಿರುವಾಗ, ಇತ್ತೀಚೆಗೆ ಸ್ಕಾಟಲೆಂಡಿನ ಗ್ಲಾಸ್ಗೋ ನಗರದಲ್ಲಿ ನಡೆದ, ಹವಾಮಾನವನ್ನು ಕುರಿತ ೧೯೭ ದೇಶಗಳು ಭಾಗವಹಿಸಿದ್ದ ಜಾಗತಿಕ ಸಮಾವೇಶದಲ್ಲಿ ಏರುತ್ತಿರುವ ಭೂಮಿಯ ತಾಪಮಾನ ಮತ್ತು ಬದಲಾಗುತ್ತಿರುವ ಹವಾಮಾನವನ್ನು ಕುರಿತು ಮಹತ್ವದ ಚರ್ಚೆಗಳು ನಡೆದವು. ೨೦೧೫ರ ಪ್ಯಾರಿಸ್ ಶೃಂಗಸಭೆಯ ನಂತರ ಇದು ಅತೀ ದೊಡ್ಡ ಶೃಂಗ ಸಭೆಯಾಗಿದ್ದು ಅಕ್ಟೋಬರ್ ೩೧ರಿಂದ ಎರಡು ವಾರಗಳವರೆಗೆ ನಡೆಯಿತು. ಜಾಗತಿಕ ತಾಪಮಾನದ ಏರಿಕೆಯನ್ನು ತಡೆಯಲು ಬೇಕಾದ ಕ್ರಮಗಳನ್ನು ಈ ಕಾಪ್–೨೬ರ ಸಮಾವೇಶದಲ್ಲಿ ಚರ್ಚಿಸಲಾಯಿತು. ಈ ಮಧ್ಯೆ ದೇಶದ ರಾಜಧಾನಿ ದೆಹಲಿಯಲ್ಲಿ ವಾಯುಮಾಲಿನ್ಯದ ಪ್ರಮಾಣ ಅಪಾಯದ ಮಟ್ಟವನ್ನು ತಲುಪಿ ಅದಕ್ಕಾಗಿ ಶಾಲೆ, ಕಾಲೇಜು, ಕಚೇರಿಗಳನ್ನು ಮುಚ್ಚಬೇಕಾದ ಪರಿಸ್ಥಿತಿ ಎದುರಾಯಿತು. ಮಂಜಿನೊಡನೆ ಹೊಗೆಯೂ ಸೇರಿ ಹೊಂಜು ನಿರ್ಮಾಣವಾಗಿ ಹಾಡು ಹಗಲಿನಲ್ಲಿ ವಾಹನ ಸವಾರರು ಹೆಡ್ ಲೈಟಗಳನ್ನು ಬಳಸಿ ಚಲಿಸಬೇಕಾದ ವಿಷಮ ಪರಿಸ್ಥಿತಿ ಎದುರಾಯಿತು. ಬೆಂಗಳೂರು ಮತ್ತು ಇತರ ಕೆಲ ಜಿಲ್ಲೆಗಳಲ್ಲಿ ಹವಾಮಾನ ವೈಪರೀತ್ಯದ ಕಾರಣಕ್ಕೆ ರಜೆ ಘೋಷಿಸಲಾಯಿತು. ಬೆಂಗಳೂರಿನ ಘನತ್ಯಾಜ್ಯ, ನೊರೆಯುಕ್ಕಿಸುವ ಕೆರೆಗಳು ಆಗಾಗ ಸುದ್ದಿಯಾಗುವುದನ್ನು ನಾವೆಲ್ಲ ನೋಡಿದ್ದೇವೆ. ನೆಲ, ಜಲ, ಗಾಳಿ, ಅಹಾರ, ಕೊನೆಗೆ ತಾಯಿಯ ಹಾಲು ಕೂಡಾ ಕಲುಷಿತವಾಗುವ ಪರಿಸ್ಥಿತಿ ಎದುರಾಗಿದೆ. ಈಗೇನು ಮಾಡುವುದು? ಇರುವುದೊಂದೇ ಭೂಮಿಯಿಂದ ಎತ್ತ ಹೋಗುವುದು? ಇದನ್ನು ಯೋಚಿಸಿದಾಗ ನೆನಪಾಗುವುದು ಬಸವಣ್ಣನವರ ಈ ವಚನ.

ಒಲೆ ಹತ್ತಿ ಉರಿದಡೆ ನಿಲಬಹುದಲ್ಲದೆ
ಧರೆ ಹತ್ತಿ ಉರಿದಡೆ ನಿಲಲುಬಾರದು.
ಏರಿನೀರುಂಬಡೆ, ಬೇಲಿ ಕೆಯ್ಯ ಮೇವಡೆ
ನಾರಿ ತನ್ನ ಮನೆಯಲ್ಲಿ ಕಳುವಡೆ
ತಾಯ ಮೊಲೆವಾಲು ನಂಜಾಗಿ ಕೊಲುವಡೆ
ಇನ್ನಾರಿಗೆ ದೂರುವೆ ಕೂಡಲಸಂಗಮದೇವಾ.

ಬಸವಣ್ಣನವರು ಅಂದು ಈ ಉಪಮೆಗಳನ್ನು ಕಾಯುವವರೇ ಕೊಲ್ಲುವವರಾದಾಗ ರಕ್ಷಿಸುವವರು ಯಾರು? ಎಂಬ ಉದ್ದೇಶದಿಂದ ಬಳಸಿದ್ದರೂ, ಧರೆ ಹತ್ತಿ ಉರಿವ ಹೋಲಿಕೆ ಸಾಧಾರಣವಾದುದಲ್ಲ. ಹೌದು ಇಂದು ಏರಿದ ಭೂಮಿಯ ತಾಪಮಾನದಿಂದಾಗಿ, ಸಂಭವಿಸುತ್ತಿರುವ ವೈಪರೀತ್ಯಗಳನ್ನು ನಾವೆಲ್ಲ ನೋಡಿದ್ದೇವೆ, ನೋಡುತ್ತಿದ್ದೇವೆ. ಒಣ ನೆಲವಾಗಿದ್ದ, ಕುಡಿವ ನೀರಿಗೂ ಸಾವಿರ ಅಡಿ ಕೊಳವೆ ಭಾವಿಯನ್ನು ತೋಡುತ್ತಿದ್ದ ಕೋಲಾರದಲ್ಲಿ ಇಂದು, ಸಾವಿರಾರು ಹೆಕ್ಟೇರ್ ಭೂಮಿ ಮಳೆಗೆ ಸಿಲುಕಿ ಹಾಳಾಗಿದೆ. ಎಲ್ಲೆಡೆ ಪ್ರವಾಹದ ಪರಿಸ್ಥಿತಿ ಎದುರಾಗಿದೆ. ಇದೂ ಕೂಡಾ ಮಾನವನ ಅತಿರೇಕದ ಜೀವನ ಶೈಲಿಯ ಒಂದು ಪರಿಣಾಮವೇ ಆಗಿದೆ ಎನ್ನುವುದು ಈಗ ಸಾಬೀತಾಗಿರುವ ವಿಷಯ. ಅದಕ್ಕೆಂದೇ ಶರಣರು ಅಂತರಂಗದ ಶುದ್ಧಿಗೆ ಮಾತ್ರ ಗಮನ ಕೊಡಲಿಲ್ಲ. ಅಂತರಂಗ ಬಹಿರಂಗಗಳೆರೆಡೂ ಶುದ್ಧವಾಗಿದ್ದಾಗ ಮಾತ್ರ ದೇವನೊಲುಮೆ ಸಾಧ್ಯ ಎನ್ನುವುದನ್ನು ಸಾರಿ ಸಾರಿ ಹೇಳಿದರು. ಅಂತರಂಗ ಶುದ್ಧವಾಗಿದ್ದಲ್ಲಿ ಬಹಿರಂಗವೂ ಶುದ್ಧವಾಗಿರುತ್ತದೆ. ಹಾಗೆಯೇ ಅಂತರಂಗದ ಶುದ್ಧಿಗೆ ಬಹಿರಂಗ ಶುದ್ಧಿಯ ಅವಶ್ಯಕತೆ ಇದೆ ಎನ್ನುವುದನ್ನು ಈ ವಚನ ಹೇಳುತ್ತದೆ.

**ಮನೆಯೊಳಗೆ ಮನೆಯೊಡೆಯನಿದ್ದಾನೊ, ಇಲ್ಲವೊ**
**ಹೊಸ್ತಿಲಲ್ಲಿ ಹುಲ್ಲು ಹುಟ್ಟಿ, ಮನೆಯೊಳಗೆ ರಜ ತುಂಬಿ,**
**ಮನೆಯೊಳಗೆ ಮನೆಯೊಡೆಯನಿದ್ದಾನೊ, ಇಲ್ಲವೊ**
**ತನುವಿನಲ್ಲಿ ಹುಸಿ ತುಂಬಿ, ಮನದೊಳಗೆ ವಿಷಯ ತುಂಬಿ**
**ಮನದೊಳಗೆ ಮನದೊಡೆಯನಿದ್ದಾನೊ, ಇಲ್ಲವೊ**
**ಇಲ್ಲ, ಕೂಡಲಸಂಗಮದೇವಾ.**

ಇಂದಿನ ಭೂಮಿಯ ಈ ಪರಿಸ್ಥಿತಿಗೆ ಕಾರಣ, ನೈಸರ್ಗಿಕ ಸಂಪನ್ಮೂಲಗಳ ಅತಿಯಾದ ಬಳಕೆ ಕಾರಣ. ಇಂದಿಗೆ ಹತ್ತು ಸಾವಿರ ವರ್ಷಗಳ ಮುಂಚೆ ಮಾನವ ಒಂದೆಡೆ ನೆಲೆಯೂರಿ ಕೃಷಿಯನ್ನು ಆರಂಭಿಸುವ ಮುನ್ನ ಎಲ್ಲವೂ ಸರಿಯಾಗಿಯೇ ಇತ್ತು. ಅಲ್ಲಿಂದೀಚೆಗೆ ಮಾನವನ ಅಭಿವೃದ್ಧಿಪರ ಚಟುವಟಿಕೆಗಳು, ಕೈಗಾರಿಕಾ ಕ್ರಾಂತಿ, ಸಂಪತ್ತಿನ ಸಂಚಯ, ಭೋಗದ ಜೀವನಶೈಲಿ, ಕೊಳ್ಳುಬಾಕುತನ, ನಗರೀಕರಣ, ಪರಿಸರಕ್ಕೆ ಮಾರಕವಾಗುವ ಜೀವನ ರೀತಿ, ಕೂಡಿಡುವ ಹಂಬಲ.... ಎಲ್ಲವೂ ಸೇರಿಕೊಂಡು ಅವನ ಇಂಗಾಲದ ಹೆಜ್ಜೆಗುರುತು ಎಂದರೆ ಕಾರ್ಬನ್ ಫುಟ್ ಪ್ರಿಂಟ್, ದೊಡ್ಡದಾಗುತ್ತ ಹೋಯಿತು. ( ಒಬ್ಬ ವ್ಯಕ್ತಿ ತನ್ನ ಜೀವಿತಾವಧಿಯಲ್ಲಿ ಎಷ್ಟು ಇಂಗಾಲವನ್ನು ಬಳಸಿ ಇಂಗಾಲದ ಡೈ ಆಕ್ಸೈಡ್ ಆಗಿಸಿ ಪರಿಸರಕ್ಕೆ ಸೇರಿಸುತ್ತಾನೆ ಎನ್ನುವುದನ್ನು ಅವನ ಕಾರ್ಬನ್ ಫುಟ್ ಪ್ರಿಂಟ್ ಎಂದು ಕರೆಯುತ್ತೇವೆ. ಉದಾಹರಣೆಗೆ ಆಫ್ರಿಕಾದ ವ್ಯಕ್ತಿಯೊಬ್ಬನ ಕಾರ್ಬನ್ ಫುಟ್ ಪ್ರಿಂಟ್ ಅತೀ ಸಣ್ಣದು ಎಂದರೆ ಸೊನ್ನೆಯಾಗಿದ್ದರೆ, ಅಮೆರಿಕಾದ ಪ್ರಜೆಯ ಕಾರ್ಬನ್ ಫುಟ್ ಪ್ರಿಂಟ್ ಅತೀ ದೊಡ್ಡದಾಗಿರಬಹುದು.) ಇದಕ್ಕೆ ಕಾರಣ ವ್ಯಕಿಯೊಬ್ಬ ತನಗೆ ಅವಶ್ಯಕತೆ ಇರುವುದಕ್ಕಿಂತಲೂ ಹೆಚ್ಚಿನ ಸಂಪತ್ತನ್ನು ಸಂಚಯ ಮಾಡುವುದು ಮತ್ತು ಭೋಗದ ಜೀವನ ಶೈಲಿಯಲ್ಲಿ ನೈಸರ್ಗಿಕ ಸಂಪನ್ಮೂಲಗಳನ್ನು ವ್ಯರ್ಥ ಮಾಡುವುದು. ಇಂದು ಉಣ್ಣುವ,



ಉಡುವ, ಎಲ್ಲದರಲ್ಲಿ ದುಂದುಗಾರಿಕೆಯನ್ನು ನೋಡುತ್ತಿದ್ದೇವೆ. ಸರಳ ಜೀವನ ನಡೆಸುವ ವ್ಯಕ್ತಿಗಿಂತ, ಐಷಾರಾಮದ ತೋರಿಕೆಯ ಬದುಕನ್ನು ನಡೆಸುವವರಿಗೆ ಹೆಚ್ಚಿನ ಬೆಲೆ ಕೊಡುವ ಸಮಾಜವನ್ನು ನೋಡುತ್ತಿದ್ದೇವೆ. ಆದರೆ ಬಸವಾದಿ ಶರಣರು ಸಂಗ್ರಹದ ಅಪಾಯವನ್ನು ಅರಿತಿದ್ದರು. ಅವರದು ಸಕಲ ಜೀವಿಗಳಿಗೆ ಲೇಸಬಯಸುವ ಜೀವನ ಶೈಲಿಯಾದರಿಂದ ಸಂಗ್ರಹವನ್ನು ವಿರೋಧಿಸಿದರು. ಉದಾ..ಬಸವಣ್ಣನವರ ವಚನ ಇದನ್ನು ಸಾಬೀತುಪಡಿಸುತ್ತದೆ.

**ಹೊನ್ನಿನೊಳಗೊಂದೊರೆಯ, ಸೀರೆಯೊಳಗೊಂದೆಳೆಯ**
**ಇಂದಿಂಗೆ ನಾಳಿಂಗೆ ಬೇಕೆಂದೆನಾದಡೆ**
**ನಿಮ್ಮಾಣೆ, ನಿಮ್ಮ ಪ್ರಮಥರಾಣೆ.**
**ನಿಮ್ಮ ಶರಣರಿಗಲ್ಲದೆಮತೊಂದನರಿಯೆ**
**ಕೂಡಲಸಂಗಮದೇವಾ.**

ಕಲ್ಯಾಣ ರಾಜ್ಯದ ಮಹಾಮಂತ್ರಿಯಾಗಿದ್ದ , ಬಸಣ್ಣನವರು ಹೇಳುವ ಈ ಮಾತನ್ನು ಕೇಳಿದರೆ, ಇಂದು ನಮ್ಮ ಮಂತ್ರಿಗಳು ಚುನಾವಣೆಯ ಸಮಯದಲ್ಲಿ ಘೋಷಿಸುವ, ನೂರಾರು, ಸಾವಿರಾರು ಕೋಟಿಯ ಆಸ್ತಿಯ ವಿವರಗಳನ್ನು ನೋಡಿದಾಗ, ಎಲ್ಲಿ ಮನುಕುಲ ಹಾದಿತಪ್ಪುತ್ತಿದೆ ಎನ್ನುವುದರ ಅರಿವಾಗುತ್ತದೆ. ಇಂದು ಇಡಿಯ ಜಗತ್ತಿನಾದ್ಯಂತ ಇಂತಹದೇ ಪ್ರವತ್ತಿ ಬೆಳೆದಿರುವುದು ಜಾಗತಿಕ ತಾಪಮಾನದ ಏರಿಕೆಗೆ ಕಾರಣವಾಗಿದೆ.

**ಮರ ಗಿಡು ಬಳ್ಳಿ ಧಾನ್ಯಂಗಳ ಬೆಳಸೆಲ್ಲವ ತರಿತರಿದು**
**ಪ್ರಾಣವ ಕೊಂದುಂಡು, ಶರೀರವ ಹೊರೆವ ದೋಷಕ್ಕೆ**
**ಇನ್ನಾವುದು ವಿಧಿಯಯ್ಯಾ**
**ಒಂದಿಂದ್ರಿಯ ಮೊದಲಾಗಿ ಐದಿಂದ್ರಿಯ ಕಡೆಯಾದ**
**ಜೀವಜಾಲದಲ್ಲಿದೆ ಚರಾಚರವೆಲ್ಲ.**
**ಅದು ಕಾರಣ,**
**ಕೂಡಲಸಂಗನ ಶರಣರು ಲಿಂಗಕ್ಕರ್ಪಿಸಿ ಪ್ರಸಾದವ ಕೊಂಡು**
**ನಿರ್ದೋಷಿಗಳಾಗಿ ಬದುಕಿದರು.**

ಈ ಉದಾಹರಣೆಯಲ್ಲಿ ಶರಣರು ಪ್ರಕೃತಿಯನ್ನು ಹೇಗೆ ತಮ್ಮ ಜೀವನದ ಒಂದು ಭಾಗವನ್ನಾಗಿ ನೋಡಿದರು. ಪ್ರಕೃತಿಯ ಜೊತೆಯಲ್ಲಿ ಜೀವನವನ್ನು ಸಮನ್ವಯವ ಗೊಳಿಸಿಕೊಂಡಿದ್ದರು ಎನ್ನುವುದು ತಿಳಿದುಬರುತ್ತದೆ. ಇಂದು ಪ್ರಕೃತಿಯನ್ನು ಬಿಟ್ಟು ಬದುಕಿದ ಮಾನವ ಹೇಗೆ ಪರಿಸರಕ್ಕೆ ವಿನಾಶಕರಿಯಾಗುತ್ತಾನೆ ಎನ್ನುವುದು ತಿಳಿದುಬಂದಿದೆ. ಅದಕ್ಕಾಗಿ ಜಾಗತಿಕ ವೇದಿಕೆಯಲ್ಲಿ ಚರ್ಚೆಗಳು ನಡೆಯುತ್ತಿವೆ. ಇಂದು ಮತ್ತೆ ನಾವು ಶರಣರ ಸಾಗಿದ ಹಾದಿಯಲ್ಲಿ ಮತ್ತೆ ನಾವು ಹೋಗಬೇಕಾಗಿದೆ. ಪ್ರಕೃತಿಯಲ್ಲಿ ಬದುಕನ್ನು ಸಮನ್ವಯಗೊಳಿಸಿಕೊಂಡು ಬಾಳಿದಾಗ ಮಾತ್ರ ಈ ಭೂಮಿಗೂ ನಮಗೂ ಭವಿಷ್ಯವಿದೆ. ಇಲ್ಲವಾದರೆ ರಷ್ಯನ್ ದಾರ್ಶನಿಕನೊಬ್ಬ ಹೇಳಿದಂತೆ, ಮಾನವ ಸತ್ತಾಗ ಹೂಳಲು ಅಥವಾ, ಸುಡಲು ಭೂಮಿಯಿದೆ. ಆದರೆ ಭೂಮಿಯೇ ಸತ್ತು ಹೋದರೆ ಹೂಳುವುದೆಲ್ಲಿ?

ಈ ಭೂಮಿ ಕೇವಲ ಮಾನವನಿಗಾಗಿ ಇಲ್ಲ ಸಕಲ ಜೀವರಾಶಿಗಳ ಬದುಕಿನ ಹೋರಾಟದ ಕೊನೆಯ ಭಾಗದಲ್ಲಿ ಮಾನವ ವಿಕಾಸವಾಗಿದ್ದಾನೆ. ಈ ಮತಿವಂತನ ದುರಾಸೆಯ ಫಲವಾಗಿ ಇಂದು ಇಡಿಯ ಜಗತ್ತು ವಿನಾಶದ ಅಂಚಿಗೆ ಬಂದು ನಿಂತಿದೆ. ಇನ್ನೂ ಎಚ್ಚೆತ್ತುಕೊಳ್ಳದಿದ್ದರೆ, ಇದರ ನಾಶಕ್ಕೆ ನಾವೇ ಕಾರಣಕರ್ತರಾಗುತ್ತೇವೆ. ಆಗ ನಮ್ಮನ್ನು ಸೃಷ್ಟಿಸಿದ, ಸೃಷ್ಟಿಯೂ ತನ್ನ ಕಾರ್ಯಕ್ಕೆ ಪಶ್ಚಾತಾಪ ಪಡುತ್ತದೆ. ಹಾಗಾಗಬಾರದು ಎನ್ನುವುದಾದರೆ ಶರಣರ ಬದುಕಿನ ಬೆಳಗನ್ನು ಹಿಡಿದು ಸರಳ ಜೀವನದ ಹಾದಿಯಲ್ಲಿ ಸಾಗುವುದು ಅನಿವಾರ್ಯವಾಗಿದೆ. ಹನ್ನೆರಡನೆಯ ಶತಮಾನದ ಅವರ ವಚನಗಳಲ್ಲಿ ೨೧ನೆಯ ಶತಮಾನದ ಹಲವಾರು ಸಮಸ್ಯೆಗಳಿಗೆ ಪರಿಹಾರವಿದೆ. ಅದನ್ನು ಕಾಣುವ ಕಣ್ಣು ನಮಗೆ ಬೇಕಿದೆ. ●

ಶಿವಭಕ್ತಿಯುಳ್ಳವಂಗೆ;
ಕಾಮ ಬೇಡ, ಕ್ರೋಧ ಬೇಡ, ಲೋಭ ಬೇಡ,
ಮೋಹ ಬೇಡ, ಮದ ಬೇಡ, ಮತ್ಸರ ಬೇಡ,
ಶಿವಭಕ್ತಿಯುಳ್ಳವಂಗೆ;
ಕಾಮ ಬೇಕು, ಕ್ರೋಧ ಬೇಕು, ಲೋಭ ಬೇಕು,
ಮೋಹ ಬೇಕು, ಮದ ಬೇಕು, ಮತ್ಸರ ಬೇಕು.
ಬೇಕೆಂಬುದಕ್ಕಾವಗುಣ?
ಕಾಮ ಬೇಕು ಲಿಂಗದಲ್ಲಿ, ಕ್ರೋಧ ಬೇಕು ಕರಣಂಗಳಲ್ಲಿ,
ಲೋಭ ಬೇಕು ಪಾದೋದಕ ಪ್ರಸಾದದಲ್ಲಿ,
ಮೋಹ ಬೇಕು ಗುರುಲಿಂಗ ಜಂಗಮದಲ್ಲಿ,
ಮದ ಬೇಕು ಶಿವಾಚಾರದಿಂದ ಘನವಿಲ್ಲವೆಂದು.
ಮತ್ಸರಬೇಕು ಹೊನ್ನು ಹೆಣ್ಣು ಮಣ್ಣಿನಲ್ಲಿ. ಇಂತೀ ಷಡ್ಗುಣವಿರಬೇಕು.
ಬೇಡವೆಂಬುದಕ್ಕಾವುದು ಗುಣ?
ಕಾಮ ಬೇಡ ಪರಸ್ತ್ರೀಯರಲ್ಲಿ, ಕ್ರೋಧ ಬೇಡ ಗುರುವಿನಲ್ಲಿ,
ಲೋಭ ಬೇಡ ತನುಮನದಲ್ಲಿ,
ಮದ ಬೇಡ ಶಿವಭಕ್ತರಲ್ಲಿ, ಮತ್ಸರ ಬೇಡ ಸಕಲ ಪ್ರಾಣಿಗಳಲ್ಲಿ,
ಇಂತೀ ಷಡ್ಗುಣವನರಿದು ಮೆರೆಯಬಲ್ಲಡೆ
ಆತನೇ ಸಹಜ ಸದ್ಭಕ್ತ ಕಾಣಾ ಕೂಡಲ ಚೆನ್ನಸಂಗಮದೇವಾ.



# ಕ್ಷೇತ್ರ ವಾರ್ತೆಗಳು




ಮುಧೋಳ : ಕದಳಿ ಮಹಿಳಾ ವೇದಿಕೆ ಉದ್ಘಾಟನಾ ಸಮಾರಂಭ, ದಿನಾಂಕ.೨೧.೧೧.೨೦೨೧
ಚಿತ್ರದಲ್ಲಿ: ಉಮಾ ಮಹೇಶ್ ರೇವಡಿಗಾರ್, ವಿಜಯಲಕ್ಷ್ಮಿ ಭದ್ರಶೆಟ್ಟಿ, ಸದಾಶಿವ ಬೀಳೂರ್, ಕಲ್ಲಪ್ಪ ಸಬರದ




ಬಳ್ಳಾರಿ: ಲಿಂ. ಬಸಯ್ಯ ವೀರಭದ್ರಯ್ಯ ಹೊಸೂರು ಮಠ ದತ್ತಿ ಹಾಗೂ
ಲಿಂ. ಕೊಟ್ರಯ್ಯ ವೀರಭದ್ರಯ್ಯ ಹೊಸೂರು ಮಠ ದತ್ತಿ ಉಪನ್ಯಾಸ, ದಿನಾಂಕ:೨೮.೧೦.೨೦೨೧
ಚಿತ್ರದಲ್ಲಿ: ಅಲುವೇಲಮ್ಮ, ಪಿ. ಮಲ್ಲಮ್ಮ, ಎಸ್.ಪಿ. ಹೊಂಬಳ, ಪುರುಷೋತ್ತಮ, ಕೆ.ಬಿ. ಸಿದ್ಧಲಿಂಗಪ್ಪ



ಬೆಂಗಳೂರು ಗ್ರಾಮಾಂತರ:
ಸಿದ್ಧರಾಮೇಶ್ವರ ಜಯಂತಿ ಹಾಗೂ ಬೊಂಬೆಮನೆಯಲ್ಲಿ ಶರಣಚಿಂತನ ಮಾ. ಸುರೇಶ್ ಬಾಬು ಶರಣ ದಂಪತಿಗಳಿಗೆ ಅಭಿನಂದನೆ
ದಿನಾಂಕ:೧೮.೧೦.೨೦೨೧
ಚಿತ್ರದಲ್ಲಿ: ಎಚ್.ಎಸ್. ರುದ್ರೇಶ್‌ಮೂರ್ತಿ, ಸಿ. ಬಸಪ್ಪ, ಆರ್. ಮುನಿರಾಜು, ಚಂದ್ರಶೇಖರ ಹಡಪದ, ಕಾಮಾಕ್ಷಮ್ಮ, ಪಿ. ಚಂದ್ರಪ್ಪ, ಎಂ. ಶಿವಪ್ರಸಾದ್, ವಿ. ಅನಿಲ್‌ಕುಮಾರ್



**ಡಾ. ಟಿ.ಎಸ್. ವೀರಪ್ಪನವರು**
ಡಾ. ಗೊ.ರು. ಚನ್ನಬಸಪ್ಪ ಅವರ ಸಮ್ಮುಖದಲ್ಲಿ
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನಲ್ಲಿ
ದಿನಾಂಕ:೩.೧೨.೨೦೨೧ರಂದು ರೂ.೮೦,೦೦೦ಗಳ
ದತ್ತಿ ಸ್ಥಾಪಿಸಿರುತ್ತಾರೆ.



ವಿಜಯಪುರ : ಲಿಂ. ಶ್ರೀಮತಿ ಶಿವಬಾಯಿ ಮಲ್ಲಪ್ಪ ತೋಟದ ಮತ್ತು ಲಿಂ. ಶ್ರೀ ನಿಂಗಪ್ಪ ಬಾಗೇವಾಡಿ ದತ್ತಿ
ದಿನಾಂಕ:೨.೧೧.೨೦೨೧, ಸಾನ್ನಿಧ್ಯ: ಪರಮಪೂಜ್ಯ ಶ್ರೀ ಶಂಭುಲಿಂಗ ಸ್ವಾಮೀಜಿ, ಚಿತ್ರದಲ್ಲಿ: ಜಂಬುನಾಥ ಕಂಚ್ಯಾಣಿ,
ಡಾ. ಮಲ್ಲಿಕಾರ್ಜುನ ಮೇತ್ರಿ, ಈರಣ್ಣ ಚಿಮ್ಮಲಗಿ, ಆರ್.ಎಂ. ತೋಂಟದ ಇತರರು




**ಕದಳಿ ಮಾಸಿಕ ಸಭೆ**
ತುಮಕೂರು ಕದಳಿ ಮಹಿಳಾ ವೇದಿಕೆ,
ದಿನಾಂಕ:೧೬.೧೦.೨೦೨೧
ಚಿತ್ರದಲ್ಲಿ: ನಾಗರತ್ನ ಚಂದ್ರಪ್ಪ,
ಶಿವಲಿಂಗಮ್ಮನವರು,
ಎಂ.ಸಿ. ಲಲಿತಾ, ಗಿರಿಜಾ ವಿರೂಪಾಕ್ಷ,
ಶಿವಮ್ಮ ಚಂದ್ರಶೇಖರ್, ರಾಚಮ್ಮ



**ಮೈಸೂರು ನಗರ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು ಮತ್ತು ಕದಳಿ ಮಹಿಳಾ ವೇದಿಕೆ**
**ಡಾ.ಸಿ.ಎನ್. ಮೃತ್ಯುಂಜಯಪ್ಪ ಆದರ್ಶ ವೈದ್ಯ ಸೇವಾ ಪ್ರಶಸ್ತಿ ಪ್ರದಾನ**

ದಿನಾಂಕ:೩೧.೧೦.೨೦೨೧ ಸಾನ್ನಿಧ್ಯ: ಪರಮಪೂಜ್ಯ ಜಗದ್ಗುರು ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು, ಪ್ರಶಸ್ತಿ ಪುರಸ್ಕೃತರು: ಡಾ.ಎಚ್.ಆರ್. ಮಣಿಕರ್ಣಿಕಾ, ಡಾ.ಬಿ.ಎನ್. ಶೇಷಾದ್ರಿ, ಚಿತ್ರದಲ್ಲಿ: ಶಾರದಾ ಶಿವಲಿಂಗಸ್ವಾಮಿ, ಸುಧಾ ಮೃತ್ಯುಂಜಯಪ್ಪ, ಎಂ. ಶಿವಣ್ಣ, ಪ್ರೊ.ಎಂ. ಕೃಷ್ಣೇಗೌಡ, ಸಿ.ಹೆಚ್. ವಿಜಯಶಂಕರ್, ಎಸ್.ಟಿ. ಸೋಮಶೇಖರ್, ಮ.ಗು. ಸದಾನಂದಯ್ಯ, ಡಾ. ಎಚ್. ಬಸವನಗೌಡಪ್ಪ, ಹೆಳವರ ಹುಂಡಿ ಸಿದ್ದಪ್ಪ



**ಬೆಂಗಳೂರು ನಗರ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು ಮತ್ತು ಕನ್ನಡ ಸಂಸ್ಕೃತಿ ಇಲಾಖೆ ವತಿಯಿಂದ ಕನ್ನಡ ರಾಜ್ಯೋತ್ಸವ ಕಾರ್ಯಕ್ರಮ**

ದಿ:೨.೧೧.೨೦೨೧

ಚಿತ್ರದಲ್ಲಿ: ಶಾಸಕರಾದ ಯು.ಬಿ. ವೆಂಕಟೇಶ್ ಶಾಸಕರು ಸೌಮ್ಯಾರೆಡ್ಡಿ, ಗೀತಾ ಜಯಂತ್ ಕೆ.ಎಸ್. ನಾಗರಾಜ್, ಪ್ರೇಮಾ ಸೋಮಸುಂದರ್ ಕೆ.ವಿ. ನಾಗರಾಜಮೂರ್ತಿ ಇತರರು



**ತುಮಕೂರು ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು**
**ಲಿಂ. ಶರಣೆ ಚೆನ್ನಬಸಮ್ಮ ಲಿಂ. ಎಸ್.ಜಿ. ಶಿವಣ್ಣ ಸಂಸ್ಮರಣಾ ದತ್ತಿ** ದಿನಾಂಕ:೨೬.೯

ಸಾನ್ನಿಧ್ಯ: ಪೂಜ್ಯ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು, ಚಿತ್ರದಲ್ಲಿ: ಎಸ್. ಕುಮಾರಸ್ವಾಮಿ, ಪರಮಶಿವಯ್ಯ ಟಿ.ಕೆ., ಡಾ. ಗೊ.ರು. ಚನ್ನಬಸಪ್ಪ, ಡಾ. ಸಿಂ.ರಾ. ಹೊನ್ನಲಿಂಗಯ್ಯ, ಎಸ್. ನಾಗಣ್ಣ, ಎಂ.ಜಿ. ಸಿದ್ಧರಾಮಯ್ಯ

Magazine Registration No. RNI 68294/97
"REGISTERED" Postal Registration No. RNP/KA/BGS/167/2021-2023
Licensed to post without Pre Payment, License No:- PMG/BG/WPP/119/2021-2023
Posted at Registered News Paper Mailing Center, Bangalore P.S.O. Mysore Road-560 026 on 5th of every Month
MAHAAMANE Monthly Magazine Total Pages 68 (Include Cover Pages) Date of Publication 1 December 2021



**ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು – ಕಾರ್ಯಕಾರಿ ಸಮಿತಿ ಸಭೆ**

ದಿ:೩.೧೨.೨೦೨೧ ಸಾನ್ನಿಧ್ಯ: ಪರಮಪೂಜ್ಯ ಜಗದ್ಗುರು ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರು
ಚಿತ್ರದಲ್ಲಿ: ಡಾ. ಗೊ.ರು. ಚನ್ನಬಸಪ್ಪ, ಪ್ರೊ. ಮಲೆಯೂರು ಗುರುಸ್ವಾಮಿ, ಪ್ರೊ. ಮಲ್ಲಿಕಾರ್ಜುನ ಮೊರಬದ, ಮೋಹನ್‌ರಾಜ್, ಡಾ. ಕುರುವ ಬಸವರಾಜ್, ಡಾ. ಸಿಂ.ರಾ. ಹೊನ್ನಲಿಂಗಯ್ಯ, ಎಸ್.ಎಂ. ಹಂಪಯ್ಯ, ಕೊಂಡಜ್ಜಿ ಬ. ಷಣ್ಮುಖಪ್ಪ, ಎಸ್.ಬಿ. ಅಂಗಡಿ, ಕೆ.ವಿ. ನಾಗರಾಜಮೂರ್ತಿ, ದಯಾನಂದ ಪಾಟೀಲ್



ಬೆಂಗಳೂರು ನಗರ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು ರಾಜರಾಜೇಶ್ವರಿ ಘಟಕದ ಸಹಯೋಗದೊಂದಿಗೆ ನಡೆಸಿದ ದತ್ತಿ ಉಪನ್ಯಾಸ, ಕಿತ್ತೂರು ಚೆನ್ನಮ್ಮ ವಿಜಯೋತ್ಸವದ ದಿನಾಚರಣೆ ಹಾಗೂ ನೂತನ ಘಟಕದ ಪದಾಧಿಕಾರಿಗಳ ಪದಗ್ರಹಣ ಸಮಾರಂಭ
ಕುಮಾರಿ ದೀಪಾ ಪ್ರಭುಸ್ವಾಮಿ ಸ್ಮರಣ ದತ್ತಿ ಉಪನ್ಯಾಸ, ದಿನಾಂಕ:೨೫.೧೦.೨೦೨೧
ಚಿತ್ರದಲ್ಲಿ: ಡಾ. ಗೊ.ರು. ಚನ್ನಬಸಪ್ಪ, ಡಾ. ಲೀಲಾದೇವಿ ಆರ್. ಪ್ರಸಾದ್,
ಕೆ.ವಿ. ನಾಗರಾಜಮೂರ್ತಿ, ಡಾ.ಸಿಂ.ರಾ. ಹೊನ್ನಲಿಂಗಯ್ಯ, ದಯಾನಂದ ಪಾಟೀಲ, ಸಂಗಮೇಶ ಗೌಡಪ್ಪನವರ್ ಇತರರು

Published by: Go.Ru. Channabasappa, Akhila Bharatha Sharana Sahitya Parishat (Regd.)
Jagadguru Sri Shivarathrishwara Circle, 1st Main, 8th Block, Jayanagar, Bengaluru - 560 070
Printed at : Sathyasri Printers Pvt Ltd., No. 16/1, 3rd Cross, 2nd Main Road,
Kasturiba Nagar, Bengaluru - 560 026

Editor : Dr. M.S. Ashadevi